# ಯಜ್ಞಗಳು

## (ನಿಜವಾ–ಸುಳ್ಳಾ)










ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



# ಯಜ್ಞಗಳು
## (ನಿಜವಾ – ಸುಳ್ಳಾ)


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 50/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮೀಣಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

**(ಇಂದೂ ಜ್ಞಾನ ವೇದಿಕೆ ಸದಸ್ಯರು)**

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ.–38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಯಜ್ಞಗಳು (ನಿಜವಾ–ಸುಳ್ಳಾ)



ಯಜ್ಞವೆಂಬ ಮಾತನ್ನು ಕೇಳದವರು ಯಾರೂ ಇರುವುದಿಲ್ಲ. ಯಜ್ಞವನ್ನು ಮಾಡುವುದು ದೇವಾಲಯಗಳಲ್ಲಾಗಲಿ, ಆಶ್ರಮದಲ್ಲಾಗಲಿ, ಮತ್ತೆಲ್ಲಾದರೂ ಕೆಲವರು ನೋಡಿರುತ್ತಾರೆ. ಕೆಲವರು ನೋಡದವರು ಸಹ ಇರಬಹುದು. ಒಂದು ಪುಣ್ಯಕ್ಷೇತ್ರದಲ್ಲಿ ನೂರು ಯಜ್ಞಕುಂಡಗಳಲ್ಲಿ ಪುರೋಹಿತ ಬ್ರಾಹ್ಮಣರು ವೇದಮಂತ್ರೋಚ್ಚಾರಣೆಯಿಂದ ಯಜ್ಞಗಳನ್ನು ಮಾಡುತ್ತಿರುವಾಗ ನಾನು ಸಹ ನೋಡಿದ್ದೇನೆ. ಯಜ್ಞಗಳನ್ನು ಹೇಗೆ ಮಾಡಬೇಕೊ ಬ್ರಾಹ್ಮಣರಿಗೆ ಮಾತ್ರ ತಿಳಿದಿರುತ್ತದೆ. ಮಾಡುವವರು ಬ್ರಾಹ್ಮಣರಾದಾಗ, ಮಾಡಿಸಿಕೊಳ್ಳುವವರು ಯಾರಾದರೂ ಆಗಿರಬಹುದು. ಯಾರಿಗಾದರೂ ಯಾವುದಾದರೂ ಕೋರಿಕೆ ಇದ್ದರೂ, ಕೆಲವು ಕೆಲಸಗಳು ನಡೆಯುವುದಕ್ಕೋಸ್ಕರವಾಗಲಿ, ಕೆಲವು ಲಾಭಗಳು ಬರುವ ಉದ್ದೇಶದಿಂದಾಗಲಿ, ಅನೇಕ ವಿಧಗಳ ಕೆಲಸಗಳು ನಡೆಯುವುದಕ್ಕೆ ಅನೇಕ ವಿಧಗಳ ಯಜ್ಞಗಳು ಮಾಡುವರೆಂದು ಕೆಲವರು ಹೇಳುತ್ತಿರುವಾಗ ಕೇಳಿದ್ದೇವೆ. ಆ ನೇತೃತ್ವದಲ್ಲಿ ಒಂದು ಕುಟುಂಬದಲ್ಲಿ ಯುಕ್ತವಯಸ್ಸು ಬಂದಿರುವ ಮಗಳಿಗೆ ಮದುವೆ ಸಂಬಂಧಗಳು ಬರಲಿಲ್ಲವೆಂದು, ಮದುವೆಗೆ ಆಲಸ್ಯವಾಗುತ್ತಿದೆ ಎಂದು, ಒಬ್ಬ ಜ್ಯೋತಿಷ್ಯನನ್ನು ಕೇಳಿದರೆ "ಆ ಯುವತಿಗೆ ಕುಜದೋಷವಿದೆ. ಆದ್ದರಿಂದ ಆಲಸ್ಯವಾಗುತ್ತಿದೆ. ಆಲಸ್ಯವಿಲ್ಲದೆ ಮದುವೆ ಬೇಗ ಆಗುವುದಕ್ಕೆ ವಿವಾಹ ಯಜ್ಞ ಮಾಡಿ ಆದಮೇಲೆ ಕುಜ ಪೂಜೆಯನ್ನು ಮಾಡಬೇಕು" ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಯಜ್ಞಕ್ಕೆ ಒಟ್ಟು 50 ಸಾವಿರ ಖರ್ಚಾಗುತ್ತದೆಂದು, 30 ಸಾವಿರ ಬ್ರಾಹ್ಮಣರಿಗೆ, ಉಳಿದ ಹಣ ತುಪ್ಪ ಮೊದಲಾದ ವಸ್ತುಗಳಿಗೆ 20 ಸಾವಿರ ಖರ್ಚಾಗುತ್ತದೆಂದು ಹೇಳಿರುವಾಗ, ಹುಡುಗಿಯ ತಾಯಿ ತಂದೆ ಒಪ್ಪಿಕೊಂಡು ಹಣ ಕೊಟ್ಟಿರುವಾಗ ವಿವಾಹ ಯಜ್ಞ ಮಾಡಿದ್ದಾರೆ. ಈ ವಿಧವಾಗಿ ಮನುಷ್ಯರು ತಮ್ಮ ಕೆಲಸಗಳನ್ನು ಈಡೇರಿಸಿಕೊಳ್ಳುವುದಕ್ಕೆ ಅನೇಕ ವಿಧಗಳ ಯಜ್ಞಗಳನ್ನು ಮಾಡುವುದು ನೋಡಿದ್ದೇನೆ. ಕೆಲವು, ಮನುಷ್ಯರ ಕೋರಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಮಾಡುವ ಯಜ್ಞಗಳಾದಾಗ, ಕೆಲವು ದೇವತೆಗಳ ಪ್ರೀತಿಗೋಸ್ಕರ, ದೇವತೆಗಳನ್ನು ತೃಪ್ತಿ ಪಡಿಸುವುದಕ್ಕೆ ಮಾಡುವ

ಯಜ್ಞಗಳಾಗಿ ಇರುತ್ತಿದ್ದವು. ಮತ್ತು ಕೆಲವು ಯಜ್ಞಗಳು ಸಮಾಜ ಶ್ರೇಯಸ್ಸಿಗೋಸ್ಕರ ಮಾಡುತ್ತಿದ್ದರು. ಸಮಾಜಕ್ಕೋಸ್ಕರ ವಿಶ್ವಶಾಂತಿ ಯಜ್ಞ, ದೇಶಶಾಂತಿ ಯಜ್ಞ ಎಂದು ಹೆಸರುಗಳನ್ನಿಟ್ಟು ಮಾಡುತ್ತಿದ್ದರು. ಹೀಗೆ ಯಾವ ಹೆಸರು ಇಟ್ಟು ಯಾವ ವಿಧವಾದ ಯಜ್ಞವನ್ನು ಮಾಡಿದರೂ, ಯಜ್ಞಕುಂಡ ಒಂದೇ ವಿಧವಾಗಿ ಇರುತ್ತದೆ, ಋತ್ವಿಕರು ಅವರೇ ಇರುತ್ತಾರೆ, ಉರಿಯುವಂತಹ ಅಗ್ನಿ ಒಂದೇ ಇರುತ್ತದೆ. ಯಜ್ಞದೊಳಗೆ ಹಾಕುವ ವಸ್ತುಗಳಲ್ಲಿ, ಹೇಳುವಂತಹ ಮಂತ್ರಗಳಲ್ಲಿ ಸ್ವಲ್ಪ ಬದಲಾವಣೆ ಮಾಡಿರಬಹುದಾಗಲಿ, ಉಳಿದಿರುವವೆಲ್ಲಾ ಒಂದೇ ವಿಧವಾಗಿ ಇರುತ್ತವೆ.

ಕರ್ನೂಲು ಜಿಲ್ಲೆಯಲ್ಲಿ ದೇವತಾ ಪ್ರತಿಮೆಗಳನ್ನು ಮಾಡುವ ಒಂದು ಊರು ಇದೆ. ಅಲ್ಲಿ ಶಿಲ್ಪಾಚಾರ್ಯರೇ ಅಲ್ಲದೆ ಉಳಿದ ಕುಲದವರು ಸಹ ಪ್ರತಿಮೆಗಳನ್ನು ಮಾಡಿ ಮಾರುತ್ತಿದ್ದರು. ನಾವು ಒಂದು ಕೃಷ್ಣಪ್ರತಿಮೆಯನ್ನು ಅಲ್ಲೇ ಕೊಂಡಿದ್ದೇವೆ. ಆಚಾರಿ ಕುಲವಲ್ಲದೆ ಬೇರೆ ಕುಲದಲ್ಲಿರುವ ವ್ಯಕ್ತಿ ನಮಗೆ ಪರಿಚಯವಿರುವುದರಿಂದ ಆತನೊಂದಿಗೆ ಕೃಷ್ಣ ಪ್ರತಿಮೆಯನ್ನು ಮಾಡಿಸಿದ್ದೇವೆ. ಕೃಷ್ಣ ಪ್ರತಿಮೆಯನ್ನು ನಾವು ಅಲ್ಲೇ ಎರಡು ದಿನಗಳಿದ್ದು ಕೊನೆಯಲ್ಲಿ ಪಾಲಿಷ್ ಮಾಡಿಸಿದ್ದೇವೆ. ಬೆಳಗ್ಗೆ ಯಿಂದ ಸಾಯಂಕಾಲದವರೆಗು ಪ್ರತಿಮೆಗಳನ್ನು ಮಾಡುವ ಸ್ಥಳದಲ್ಲೇ ಇದ್ದು ಅಲ್ಲಿಯ ಕೆಲಸವನ್ನು ನೋಡುತ್ತಿದ್ದೆನು. ಅಲ್ಲಿ ಹೆಣ್ಣು ದೇವತೆಯ ಗೊಂಬೆ ಒಂದು ಇತ್ತು. ನಾನು ಅಲ್ಲಿರುವ ಸಮಯದಲ್ಲೇ ಒಬ್ಬ ವ್ಯಕ್ತಿ ಬಂದು ಚೌಡೇಶ್ವರಿ ಪ್ರತಿಮೆ ಬೇಕೆಂದು ಕೇಳಿದರೆ ಅಲ್ಲಿರುವ ಶಿಲ್ಪಾಚಾರ್ಯನು, ತಯಾರಾಗಿದೆ 15 ಸಾವಿರ ಕೊಟ್ಟು ತೆಗೆದುಕೊಂಡು ಹೋಗಿ ಎಂದು ಹೇಳಿದನು. ಬಂದಿರುವವರು 10 ಸಾವಿರ ಕೊಡುತ್ತೇವೆ ಅಂದಿದ್ದಾರೆ. ಅದಕ್ಕೆ ಶಿಲ್ಪಾಚಾರ್ಯನು ಕೊಡುವುದಿಲ್ಲವೆಂದು ಹೇಳಿದನು. ಎರಡು ಗಂಟೆಗಳ ನಂತರ ಮತ್ತೊಬ್ಬ ವ್ಯಕ್ತಿ ಬಂದು ದೊಡ್ಡಮ್ಮ ಪ್ರತಿಮೆ ಬೇಕೆಂದಿದ್ದಾನೆ. ಆಗ ಅಲ್ಲಿರುವ ಶಿಲ್ಪಾಚಾರ್ಯನು ಮೊದಲನೆಯ ವ್ಯಕ್ತಿಗೆ ತೋರಿಸಿರುವ ಗೊಂಬೆಯನ್ನೇ ತೋರಿಸಿ 15 ಸಾವಿರ ರೇಟು ಹೇಳಿದನು. ಈ ಸಾರಿ ಬಂದಿರುವ ವ್ಯಕ್ತಿ 9 ಸಾವಿರಕ್ಕೆ ಕೇಳಿದ್ದಾನೆ.

ಕೊನೆಗೆ ವ್ಯಾಪಾರ ಸರಿಹೋಗಲಿಲ್ಲ. ಬಂದಿರುವವನು ಮತ್ತೊಂದು ಕಡೆ ಹೋದನು. ನಂತರ ಸ್ವಲ್ಪ ಸಮಯಕ್ಕೆ ಮತ್ತೊಬ್ಬ ವ್ಯಕ್ತಿ ಬಂದು ರಾಜರಾಜೇಶ್ವರಿ ದೇವಿ ಪ್ರತಿಮೆ ಬೇಕೆಂದಿದ್ದಾನೆ. ಆಗಲೂ ಸಹ ಶಿಲ್ಪಾಚಾರ್ಯನು ಬಂದಿರುವವನಿಗೆ ಮೊದಲು ಇಬ್ಬರಿಗೆ ತೋರಿಸಿರುವ ಪ್ರತಿಮೆಯನ್ನೇ ತೋರಿಸಿದ್ದಾನೆ. ಆತನಿಗೂ ಸಹ 15 ಸಾವಿರ ಬೆಲೆಯನ್ನೇ ಹೇಳಿದ್ದಾನೆ. ಬಂದಿರುವ ವ್ಯಕ್ತಿ ಪ್ರತಿಮೆಯನ್ನು ನೋಡಿ ಒಂದು ಸಾವಿರ ರೂಪಾಯಿಗಳನ್ನು ಕಡಿಮೆ ಮಾಡಿಕೊಂಡು ಕೊಡು ಎಂದಿದ್ದಾನೆ. ಆಗ ಶಿಲ್ಪಾಚಾರ್ಯನು 14 ಸಾವಿರ ಬೆಲೆಗೆ ಒಪ್ಪಿಕೊಂಡು ಆತನಿಗೆ ಆ ಪ್ರತಿಮೆಯನ್ನು ಕೊಡುವುದು ನಡೆದಿದೆ. ಇದೆಲ್ಲವೂ ಬೆಳಿಗ್ಗೆಯಿಂದ ಸಾಯಂಕಾಲದವರೆಗು ನನ್ನ ಮುಂದೆಯೇ ನಡೆದಿದೆ.

ಆಗ ಆ ಶಿಲ್ಪಾಚಾರ್ಯನ ಜೊತೆ ನಾನು ಮಾತನಾಡುತ್ತಾ "ಬೆಳಿಗ್ಗೆಯಿಂದ ಮೂವರು ವ್ಯಕ್ತಿಗಳು ಬಂದು ಒಬ್ಬ ಚೌಡೇಶ್ವರಿಯನ್ನು, ಮತ್ತೊಬ್ಬ ದೊಡ್ಡಮ್ಮನನ್ನೂ, ಮತ್ತೊಬ್ಬರು ರಾಜರಾಜೇಶ್ವರಿಯನ್ನು ಕೇಳಿದ್ದಾರೆ. ನೀನೇನೋ ಮೂವರಿಗು ಒಂದೇ ಪ್ರತಿಮೆಯನ್ನು ತೋರಿಸಿ ರೇಟು ಹೇಳಿದ್ದೀಯ. ಮೂವರು ದೇವತೆಗಳನ್ನು ಅವರು ಕೇಳಿದಾಗ, ಬೇರೆ ಬೇರೆಯಾಗಿರುವ ದೇವತಾ ಪ್ರತಿಮೆಗಳನ್ನು ತೋರಿಸದೆ, ಒಂದೇ ಪ್ರತಿಮೆಯನ್ನು ತೋರಿಸುವುದರಲ್ಲಿ ಅರ್ಥ ವೇನು" ಎಂದು ಕೇಳಿದ್ದೇನೆ. ಆಗ ಆತನು ಈ ವಿಧವಾಗಿ ಹೇಳುತ್ತಾ "ಪುರುಷ ಪ್ರತಿಮೆಗಳಿಗೆ ಪ್ರತಿಯೊಂದಕ್ಕೂ ಬೇರೆ ಬೇರೆ ಆಕಾರಗಳು, ಬೇರೆ ಬೇರೆ ಆಯುಧಗಳು, ಬೇರೆ ಬೇರೆ ಅಲಂಕಾರಗಳು ಇರುತ್ತವೆ. ಉದಾಹರಣೆಗೆ ವಿಘ್ನೇಶ್ವರನಿಗೆ, ವೀರಭದ್ರನಿಗೆ, ಸುಬ್ರಮಣ್ಯಸ್ವಾಮಿಗೆ ಆಕಾರಗಳು ಬೇರೆ, ಅಲಂಕಾರಗಳು ಬೇರೆ, ಆಯುಧಗಳು ಬೇರೆಯಾಗಿರುವುದರಿಂದ ಅವರ ಪ್ರತಿಮೆಗಳನ್ನು ಬೇರೆ ಬೇರೆಯಾಗಿ ತಯಾರಿಸಬೇಕಾಗಿರುತ್ತದೆ, ಹೀಗೆ ಪುರುಷ ಪ್ರತಿಮೆಗಳನ್ನು ಒಂದರ ಜೊತೆಗೆ ಮತ್ತೊಂದನ್ನು ಹೋಲಿಸಿ ತೋರಿಸುವುದಕ್ಕೆ ಆಗುವುದಿಲ್ಲ. ಅದೇ ಹೆಣ್ಣು ದೇವತೆ ಪ್ರತಿಮೆಗಳ ವಿಷಯದೊಳಗೆ ಬಂದರೆ, ಒಂದು ಪ್ರತಿಮೆಯನ್ನು ಯಾವ ದೇವತೆಯಂತಾದರೂ ಹೋಲಿಸಿ

ತೋರಿಸಬಹುದು, ಯಾರೂ ಅಲ್ಲ ಎನ್ನಲಾರರು. ಒಂದೇ ಹೆಣ್ಣು ಪ್ರತಿಮೆಗೆ ಎಷ್ಟು ಹೆಸರುಗಳನ್ನಾದರೂ ಇಡಬಹುದು. ಯಾವ ದೇವತೆಯನ್ನಾಗಿಯಾದರೂ ತೋರಿಸಬಹುದು." ಅಂದಿದ್ದಾನೆ. ಆ ಶಿಲ್ಪಾಚಾರ್ಯನ ಮಾತನ್ನು ಕೇಳಿದ ನಂತರ ಯಜ್ಞಾಚಾರ್ಯರು ನೆನಪಿಗೆ ಬಂದಿದ್ದಾರೆ. ಒಂದೇ ಯಜ್ಞವನ್ನು ಎಷ್ಟು ಹೆಸರುಗಳನ್ನಾದರೂ ಇಟ್ಟು ಮಾಡಬಹುದೆಂದು, ಅದರಲ್ಲಿ ಇದು ಹೌದು, ಅದು ಅಲ್ಲ ಎನ್ನುವುದಕ್ಕೆ ಆಗುವುದಿಲ್ಲವೆಂದು ಅರ್ಥವಾಯಿತು. ಒಂದೇ ಹೆಣ್ಣು ದೇವತೆ ಪ್ರತಿಮೆಯನ್ನು ನನ್ನ ಮುಂದೆನೇ ಮೂರು ಹೆಸರುಗಳನ್ನಿಟ್ಟು ತೋರಿಸಿದರೂ ಯಾರೂ ಇಲ್ಲ ಅನ್ನಲಿಲ್ಲ. ಹಾಗೇ ಒಂದೇ ಯಜ್ಞಕುಂಡದಲ್ಲಿ ಯಾವ ಹೆಸರು ಇಟ್ಟು, ಯಾವ ಮಂತ್ರವಾದರೂ ಓದಿ, ಯಾವ ಯಜ್ಞ ವನ್ನಾದರೂ ಮಾಡಬಹುದೆಂದು ತಿಳಿಯುತ್ತಿದೆ.

ಪೂರ್ವದಿಂದ ಯಜ್ಞಗಳನ್ನು ಮನುಷ್ಯರು ಮಾಡುತ್ತಿದ್ದ ಹಾಗೆ ಚರಿತ್ರೆ ಹೇಳುತ್ತಿದೆ. ತ್ರೇತಾಯುಗದಲ್ಲಿ ದಶರಥನು ಪುತ್ರ ಸಂತಾನಕ್ಕೋಸ್ಕರ ಯಜ್ಞವನ್ನು ಮಾಡಿದ್ದಾನೆಂದು, ರಾಮಾಯಣವನ್ನು ಓದಿದವರಿಗೆಲ್ಲರಿಗೂ ತಿಳಿದಿರುತ್ತದೆ. ರಾಮನು ಹುಟ್ಟಿದ ನಂತರ ವಿಶ್ವಾಮಿತ್ರನು ಯಜ್ಞ ರಕ್ಷಣೆ ನಿಮಿತ್ತ ರಾಮನನ್ನು ತನ್ನಹಿಂದೆ ಕರೆದುಕೊಂಡು ಹೋಗಿದ್ದಾನೆಂದು ಸಹ ಕೇಳಿದ್ದೇವೆ. ಅದೇ ಸಮಯದಲ್ಲಿ ರಾವಣಬ್ರಹ್ಮ, ಯಜ್ಞ ಭಂಗವನ್ನು ಮಾಡಿಸುತ್ತಿರುವನೆಂದು ಸಹ ಕೇಳಿದ್ದೇವೆ. ಈ ವಿಧವಾಗಿ ತ್ರೇತಾ ಯುಗದಲ್ಲೇ ಅಲ್ಲದೆ, ದ್ವಾಪರ ಯುಗದಲ್ಲಿಯೂ ಸಹ ಎಷ್ಟೋ ಮಹರ್ಷಿಗಳು ಯಜ್ಞಗಳನ್ನು ಮಾಡಿದ ಹಾಗೆ ಚರಿತ್ರೆ ಹೇಳುತ್ತಿದೆ. ಪ್ರಸ್ತುತ ಕಲಿಯುಗದಲ್ಲಿಯೂ ಸಹ ಬಹಳ ಕಡೆ ಯಜ್ಞಗಳನ್ನು ಬ್ರಾಹ್ಮಣರು ಮಾಡುತ್ತಿರುವಾಗ ಎಷ್ಟೋ ಜನರು ಮಾಡಿಸುತ್ತಿದ್ದಾರೆ. ಅನೇಕ ಆಶ್ರಮಗಳಲ್ಲಿ, ಅನೇಕ ದೇವಾಲಯಗಳಲ್ಲಿ ಯಜ್ಞ ಕಾರ್ಯಗಳು ನಡೆಯುತ್ತಿವೆ. ವೇದ ಮಂತ್ರಗಳನ್ನು ಕಲಿತವರು ಯಜ್ಞ ಕಾರ್ಯಗಳನ್ನು ಮಾಡುವ ಋತ್ವಿಕರಾಗಿ ಯಜ್ಞಗಳನ್ನು ಮಾಡುತ್ತಿರುವಾಗ, ಮಾಡಿಸುವವರು ಎಷ್ಟೋ ಜನರಿದ್ದಾರೆ. ಆದರೆ ಸಾಮಾನ್ಯ ಮನುಷ್ಯನಿಗೆ ಯಜ್ಞವೆಂದರೆ ಏನೋ ತಿಳಿಯದು.

ಹೇತುವಾದಿಗಳಿಗಾಗಲಿ, ನಾಸ್ತಿಕವಾದಿಗಳಿಗಾಗಲಿ ಯಜ್ಞಗ್ಗಳನ್ನು ಕುರಿತು ತಿಳಿಯದು. ವಾಸ್ತವವಾಗಿ ಹೇಳಬೇಕೆಂದರೆ ಯಜ್ಞಗ್ಗಳನ್ನು ಕುರಿತಿರುವ ಪೂರ್ತಿ ಸಮಾಚಾರ ಯಜ್ಞವನ್ನು ಮಾಡಿಸುವ ಧನಿಕರಿಗೂ ಸಹ ತಿಳಿಯದು. ಆದ್ದರಿಂದ ಶಿಲ್ಪಾಚಾರ್ಯನು ಒಂದು ಪ್ರತಿಮೆಯನ್ನು ತೋರಿಸಿ ಮೂವರಿಗೂ ಮೂರು ಹೆಸರುಗಳನ್ನು ಹೇಳಿದಹಾಗೆ ಯಜ್ಞಾಚಾರ್ಯರಾದವರೂ ಸಹ ಯಜ್ಞಕ್ಕೆ ಯಾವ ಹೆಸರಾದರೂ ಇಟ್ಟು ಮಾಡುತ್ತಿದ್ದಾರೆ.

ಒಬ್ಬ ಸಾಮಾನ್ಯನು ಯಜ್ಞಗ್ಗಳನ್ನು ಕುರಿತು ಇರುವ ಪೂರ್ತಿ ಸಮಾಚಾರವನ್ನು ತಿಳಿದುಕೊಳ್ಳಬೇಕೆಂದರೆ, ಎಷ್ಟೋ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದುಕೊಳ್ಳಬೇಕಾಗಿರುತ್ತದೆ. ಆ ಪ್ರಶ್ನೆಗಳು ಯಾವವು ಎಂದರೆ! 1) ಯಜ್ಞವೆಂದರೆ ಏನು? 2) ಯಜ್ಞಗ್ಗಳನ್ನು ಎಲ್ಲಿ ಮಾಡಬೇಕು? 3) ಯಜ್ಞಗ್ಗಳನ್ನು ಯಾರು ಮಾಡಿಸಬೇಕು? 4) ಯಜ್ಞಗ್ಗಳನ್ನು ಯಾರು ಮಾಡಬೇಕು? 5) ಯಜ್ಞಗ್ಗಳು ಎಷ್ಟು ವಿಧಗಳು? 6) ಯಜ್ಞಗ್ಗಳಿಂದ ಕರ್ಮ ಬರುತ್ತದಾ? ಹೋಗುತ್ತದಾ? 7) ಯಜ್ಞ ಮಾಡುವುದಕ್ಕೆ ಮಂತ್ರ ಅವಶ್ಯವಾ? 8) ಯಜ್ಞಗಳನ್ನು ಯಾವ ಲಗ್ನದಲ್ಲಿ ಮಾಡಬೇಕು? 9) ಯಜ್ಞಗಳನ್ನು ಎಷ್ಟು ಕಾಲ ಮಾಡಬೇಕು? 10) ಯಜ್ಞದಲ್ಲಿ ಏನು ನಡೆಯುತ್ತಿದೆ? 11) ಯಜ್ಞದಲ್ಲಿ ಅಗ್ನಿ ಯಾವುದು, ಸಮಿಧೆ ಯಾವುದು? 12) ಯಜ್ಞಗಳಿಂದ ಕೋರಿಕೆಗಳು ಈಡೇರುತ್ತವಾ? 13) ಯಜ್ಞವನ್ನು ರಾವಣನು ಏಕೆ ಭಂಗ ಮಾಡುತ್ತಿದ್ದನು? ಹೀಗೆ ಎಷ್ಟೋ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ತಿಳಿದುಕೊಂಡಾಗ, ಯಜ್ಞವನ್ನು ಕುರಿತು ಪೂರ್ತಿಯಾಗಿ ತಿಳಿದಂತಾಗುತ್ತದೆ.

ಯಜ್ಞ ಎಂದರೆ ನಮ್ಮ ಕಣ್ಣಿಗೆ ಕಾಣಿಸುವಹಾಗೆ ತಿಳಿಯುತ್ತಿರುವು ದೇನೆಂದರೆ! ಇರುವುದನ್ನು ಇಲ್ಲದಂತೆ ಮಾಡುವುದೆಂದು ತಿಳಿಯುತ್ತಿದೆ. ಯಜ್ಞದಲ್ಲಿ ಮುಖ್ಯವಾದ ಕಾರ್ಯ ಸುಟ್ಟುಹಾಕುವುದು, ಮುಖ್ಯವಾದ ಅಗ್ನಿ ಉರಿದರೇನೆ ಯಜ್ಞ, ಅಗ್ನಿ ಇಲ್ಲದೇ ಹೋದರೆ ಯಜ್ಞವೇ ಅಲ್ಲ. ಯಜ್ಞದಲ್ಲಿ ಮುಖ್ಯವಾದದ್ದು ಅಗ್ನಿ, ನಡೆಯುತ್ತಿರುವ ಕೆಲಸ ಸುಡುವುದು. ಸುಡುವುದರಿಂದ ಇರುವ ವಸ್ತುಗಳು

ಇಲ್ಲದೇ ಹೋಗುತ್ತಿವೆ. ಅಲ್ಲಿರುವ ಎಲ್ಲವುಗಳನ್ನು ಸಮಿಧೆಗಳಾಗಿ ಅಗ್ನಿಯಲ್ಲಿ ಹಾಕುವುದರಿಂದ ಇರುವವೆಲ್ಲವೂ ನಾಶವಾಗಿ ಹೋಗುತ್ತಿವೆ ಎಂದು ತಿಳಿಯುತ್ತಿದೆ. ಅಗ್ನಿ ಸರ್ವವನ್ನು ದಹಿಸುತ್ತದೆ. ಅಗ್ನಿಯಿಂದ ನಾಶ ಹೊರತು ಏನೂ ಇಲ್ಲವೆಂದು ಕಾಣಿಸುತ್ತಿದೆ. ಈ ಸೂತ್ರವನ್ನು ಅನುಸರಿಸಿ ನೋಡಿದರೆ ಎಲ್ಲಾದರೂ ಒಂದು ವಸ್ತುವಾಗಲಿ, ಒಂದು ಪದಾರ್ಥವಾಗಲೀ ತನ್ನ ಸಾಮರ್ಥ್ಯವನ್ನು ಕಳೆದುಕೊಂಡು, ಬದಲಾವಣೆ ಹೊಂದಿ ಇಲ್ಲದೆ ಹೋಗುತ್ತಿದೆಯೋ, ಅಲ್ಲಿ ಯಜ್ಞ ನೆನಪಾಗದೆ ಇರುವುದಿಲ್ಲ. ಎಲ್ಲಾದರೆ ನಾಶ ನಡೆಯುತ್ತಿದೆಯೋ, ಅಲ್ಲಿ ಯಜ್ಞ ನಡೆದಹಾಗೇ ಲೆಕ್ಕಿಸಬೇಕು. ಇದರ ಪ್ರಕಾರ ಕಾಣಿಸುವ ಅಗ್ನಿಯಿಂದ ವಸ್ತುಗಳನ್ನು ಸುಡುವ ಯಜ್ಞವೇ ಅಲ್ಲದೇ, ಕಾಣಿಸದ ಅಗ್ನಿಯಿಂದ ನಾಶವಾಗುವುದೆಲ್ಲಾ ಯಜ್ಞವೇ ಆಗುತ್ತದೆ. ಕಾಣಿಸದ ಅಗ್ನಿ ಯಾವ ರೂಪದಲ್ಲಾದರೂ ಇರಬಹುದು. ಉದಾಹರಣೆಗೆ ನೂರು ಜನ ಸೈನಿಕರ ಮೇಲೆ ಶತ್ರುಗಳು ವಿಮಾನದಿಂದ ಬಾಂಬುಗಳನ್ನು ಹಾಕಿದಾಗ, ಬಾಂಬು ಸ್ಫೋಟಕ್ಕೆ ನೂರು ಜನ ಸೈನಿಕರ ಶರೀರಗಳು ಇರುವ ಸ್ಥಿತಿಯನ್ನು ಕಳೆದುಕೊಂಡು, ಛಿದ್ರವಾಗಿ ಅವರೆಲ್ಲರೂ ಸತ್ತುಹೋದಾಗ, ಆ ಸಂಘಟನೆಯನ್ನೂ ಸಹ ಒಂದು ವಿಧವಾದ ಯಜ್ಞವೇ ಅನ್ನಬಹುದು. ಅದಕ್ಕೆ ಹೆಸರನ್ನೂ ಸಹ ಇಡಬಹುದು. ಸಂಘಟನೆ ಕಾಣಿಸಿದರೂ ಈ ನರಮೇಧದಲ್ಲಿನ ಅಗ್ನಿ ಕಾಣಿಸಲಿಲ್ಲ. ಯಜ್ಞದಲ್ಲಿ, ಅಗ್ನಿ ಉರಿಯುವ ರೂಪದಲ್ಲೇ ಇರಬೇಕೆನ್ನುವ ನಿಯಮವಿಲ್ಲ. ಯಾವ ರೂಪದಲ್ಲಾದರೂ ಇರಬಹುದು. ಯಜ್ಞದಲ್ಲಿ ಸುಟ್ಟುಹೋಗುವವು ಅಥವಾ ನಾಶವಾಗುವವು ಯಾವಾದರೂ ಸ್ಥೂಲವಾಗಿ ಇರಬಹುದು ಅಥವಾ ಸೂಕ್ಷ್ಮವಾಗಿ ಇರಬಹುದು. ಹಾಗೇ ಯಜ್ಞದಲ್ಲಿ ನಾಶಮಾಡುವ ಅಥವಾ ಇಲ್ಲದೆ ಮಾಡುವ, ದಹಿಸುವ ಅಗ್ನಿ ಸ್ಥೂಲವಾಗಿ ಇರಬಹುದು, ಅಥವಾ ಸೂಕ್ಷ್ಮವಾಗಿ ಇರಬಹುದು. ಈ ವಿಧವಾಗಿ ಒಂದು ಲೆಕ್ಕ ಪ್ರಕಾರ ಸೂತ್ರಬದ್ಧವಾಗಿ ನೋಡಿದರೆ, ಎಲ್ಲಾದರೆ ಇರುವುದು ಇಲ್ಲದೇ ಹೋಗುತ್ತಿದೆಯೋ, ಎಲ್ಲಾದರೆ ಇರುವುದೆಲ್ಲಾ ನಾಶವಾಗಿ ಹೋಗುತ್ತಿದೆಯೋ, ಎಲ್ಲಾದರೇ ಒಂದು ವಸ್ತುವಾಗಲೀ, ಒಂದು ಪದಾರ್ಥ ವಾಗಲೀ ತನ್ನ ಸಾಮರ್ಥ್ಯವನ್ನೂ, ರೂಪವನ್ನು ಕಳೆದುಕೊಂಡು, ಬೇರೆ ವಿಧವಾಗಿ

ಬದಲಾವಣೆ ಹೊಂದುತ್ತಿದೆಯೋ ಆ ಕಡೆಯೆಲ್ಲಾ ಯಜ್ಞ ನಡೆಯುತ್ತಿದೆಯೆಂದು ಲೆಕ್ಕಿಸಬೇಕು.

ಯಜ್ಞವನ್ನು ಈ ವಿಧವಾಗಿ ಲೆಕ್ಕಿಸುವುದರಿಂದ ಅದು ಶಾಸ್ತ್ರಬದ್ಧ ವಾಗಿದೆಯೆಂದು ತಿಳಿಯುತ್ತದೆ. ಯಜ್ಞ ಅನ್ನುವ ಪ್ರಸ್ತಾವನೆ ಎಲ್ಲಿ ಬಂದರೂ, ಅದು ಈ ಸೂತ್ರಕ್ಕೆ ಸಂಬಂಧಿಸಿ ಇರುವುದನ್ನು ಶಾಸ್ತ್ರಬದ್ಧತೆ ಅನ್ನುತ್ತಿದ್ದೇವೆ. ಹಾಗಲ್ಲದೆ ಒಂದೊಂದು ಕಡೆ ಒಂದೊಂದು ವಿಧವಾಗಿ ಹೇಳಿಕೊಂಡರೆ ಅದನ್ನು ಶಾಸ್ತ್ರಬದ್ಧತೆ ಅನ್ನುವುದಿಲ್ಲ, ಹಾಗೇ ಸೂತ್ರಬದ್ಧತೆ ಅನ್ನುವುದಕ್ಕೂ ಆಗುವುದಿಲ್ಲ. ಶಾಸ್ತ್ರಬದ್ಧತೆ ಇರುವ ವಿಷಯ ಎಲ್ಲಾದರೂ ಬದಲಾವಣೆ ಹೊಂದದೆ ಒಂದೇ ಭಾವವನ್ನು ಕೊಡುವುದಾಗಿ ಇರುತ್ತದೆ. ಈಗ ನಾವು ಹೇಳಿಕೊಂಡಿರುವ ಶಾಸ್ತ್ರಬದ್ಧತೆಯೊಂದರ ಪ್ರಯೋಜನೆ ಮುಂದಿನ ಬರವಣಿಗೆಯಲ್ಲಿ ತಿಳಿದು ಬರುತ್ತದೆ. ಈಗ ಈ ಶಾಸ್ತ್ರಬದ್ಧತೆಯನ್ನು ಕುರಿತು ಹೇಳಿಕೊಳ್ಳದೇ ಹೋದರೆ ಹೊರಗೆ ಕಾಣಿಸುವ ಯಜ್ಞಗಳನ್ನು ಒಂದು ವಿಧವಾಗಿ, ಭಗವದ್ಗೀತೆಯಲ್ಲಿ ಭಗವಂತನು ಹೇಳಿರುವ ಯಜ್ಞಗಳನ್ನು ಒಂದು ವಿಧವಾಗಿ ಹೇಳಿಕೊಳ್ಳಬೇಕಾ ಗುತ್ತದೆ. ಹಾಗೆ ಹೇಳಿಕೊಂಡರೆ ಹೇತುವಾದಕ್ಕೆ ಉತ್ತರವಿಲ್ಲದ ಹಾಗೆ ಉಳಿದುಹೋಗುತ್ತದೆ. ಅಶಾಸ್ತ್ರೀಯವಾಗಿ ಕಾಣಿಸುತ್ತದೆ. ಅಶಾಸ್ತ್ರೀಯ ವಿಷಯ ಕಲ್ಪಿತ ವಿಷಯವಾಗುತ್ತದೆ, ನಿರೂಪಣೆಗೆ ಬಾರದೆ ಹೋಗುತ್ತದೆ. ನಾನು ಹೇಳುವ ಬೋಧನೆ ಶಾಶ್ವತವಾಗಿ ಪ್ರಾಣ ಇರುವುದಾಗಿ, ಪ್ರತ್ಯಕ್ಷ ಪ್ರಮಾಣವಾಗಿ, ಶಾಸ್ತ್ರೀಯತೆ ಹೊಂದಿರುವುದಾಗಿ ಇರಬೇಕೆನ್ನುವ ಉದ್ದೇಶದಿಂದ ಮೊದಲೇ ಯಜ್ಞ ಶಾಸ್ತ್ರಬದ್ಧವಾದದ್ದೆಂದು, ಅದಕ್ಕೆ ಸಂಬಂಧಿಸಿದ ಸೂತ್ರವನ್ನು ಹೇಳಿದ್ದೇವೆ.

ಯಜ್ಞಕ್ಕೆ ಇರುವ ಅರ್ಥವನ್ನೂ, ಅದಕ್ಕೆ ಇರುವ ಶಾಸ್ತ್ರೀಯತೆಯನ್ನು ಕುರಿತು ಹೇಳಿಕೊಂಡಿದ್ದೇವೆ. ಬಹಳ ಜನ ಮನುಷ್ಯರು ಯಜ್ಞಗಳು ದೈವಾರಾಧನೆಯಲ್ಲಿ ಭಾಗವೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಕೆಲವರು ಯಜ್ಞವನ್ನು ಎಷ್ಟೋ ಪೂಜ್ಯಭಾವದಿಂದ, ಗೌರವಭಾವದಿಂದ ನೋಡುತ್ತಿರುವಾಗ,

ನಾವು ಪ್ರತ್ಯೇಕವಾಗಿ ಯಜ್ಞವೆಂದರೆ ನಾಶ ಮಾಡುವುದೆಂದು ಹೇಳುವುದು, ಕೆಲವರಿಗೆ ಕೇಳುವುದಕ್ಕೆ ಸಂಕೋಚವಾಗಿ ಇರುತ್ತದೆ. ಯಾರಿಗೆ ಎಂತಹ ಇಕ್ಕಟ್ಟಾಗಿದ್ದರೂ ಅವರನ್ನು ದೃಷ್ಟಿಯಲ್ಲಿಟ್ಟುಕೊಂಡು, ಸತ್ಯವನ್ನು ಹೇಳದೆ ಹೋದರೇ ಭೂಮಿ ಮೇಲೆ ಇರುವವರೆಲ್ಲರನ್ನು ತೊಂದರೆಯಲ್ಲಿ ಇಟ್ಟಂತಾಗುತ್ತದೆ. ಅಷ್ಟೇ ಅಲ್ಲದೇ ಹೇಳುತ್ತಿರುವ ವಿಷಯ ದೈವಸಂಬಂಧ ಜ್ಞಾನವಾದರೆ, ಅದನ್ನು ಕುರಿತು ಅಸತ್ಯವಾಗಿ ಹೇಳುವುದರಿಂದ ಕೆಲವು ಜನ್ಮಗಳಿಗೆ ಸರಿಹೋಗುವ ಪಾಪ ಸಂಭವಿಸುತ್ತದೆ. ಯಜ್ಞವೆನ್ನುವುದು ಸಾಮಾನ್ಯವಾದ ವಿಷಯವಲ್ಲ. ಒಂದು ವಿಧವಾಗಿ ಧರ್ಮವಾದದ್ದು, ಒಂದು ವಿಧವಾಗಿ ಅಧರ್ಮವಾದದ್ದು. ಯಜ್ಞವೆನ್ನುವುದು ಆಚರಿಸುವವನನ್ನು ಅನುಸರಿಸಿ, ಆಚರಿಸುವ ವಿಧಾನವನ್ನು ಅನುಸರಿಸಿ, ಯಜ್ಞ ಧರ್ಮವೂ ಆಗಬಹುದು ಅಥವಾ ಅಧರ್ಮವೂ ಆಗಬಹುದು. ಯಜ್ಞ ಧರ್ಮಾಧರ್ಮಗಳಿಗೆ ಸಂಬಂಧಿಸಿದ ವಿಷಯ, ಆದ್ದರಿಂದ ಈಗ ಇದನ್ನು ಕುರಿತು ನಾನು ಬರೆಯಬೇಕಾಗಿ ಬಂದಿದೆ.

ಪೂರ್ವದಿಂದ ಯಜ್ಞಗಳ ಚರಿತ್ರೆಯನ್ನು ಹೇಳಿಕೊಂಡರೆ ಯಜ್ಞಗಳು ಎರಡು ವಿಧಗಳಾಗಿ ಇವೆಯೆಂದು ಹೇಳಬಹುದು. ಒಂದು ಕಾಣಿಸುವ ಯಜ್ಞಗಳು, ಎರಡು ಕಾಣಿಸದ ಯಜ್ಞಗಳೆಂದು ಹೇಳಬಹುದು. ಕಾಣಿಸದ ಯಜ್ಞಗಳನ್ನು ಎರಡು ವಿಧಗಳಾಗಿ ವಿಭಜಿಸಬಹುದು. **ಕಾಣಿಸದ ಸೂಕ್ಷ್ಮ ಯಜ್ಞಗಳಲ್ಲಿ ಒಂದು ಕರ್ಮವನ್ನು ತಂದಿಡುವ ಯಜ್ಞವೆಂದು, ಎರಡು ಕರ್ಮವನ್ನು ಇಲ್ಲದೇ ಮಾಡುವ ಯಜ್ಞವೆಂದು ಹೇಳಬಹುದು**. ಯಜ್ಞಗಳು ಸ್ಥೂಲವೆಂದೂ, ಸೂಕ್ಷ್ಮವೆಂದೂ ಎರಡು ವಿಧಗಳಾದಾಗ, ಸೂಕ್ಷ್ಮದಲ್ಲಿ ಮತ್ತೆ ಎರಡು ವಿಧಗಳಾಗಿವೆ. ಇದನ್ನನುಸರಿಸಿ ಯಜ್ಞಗಳು ಒಟ್ಟು ಮೂರು ವಿಧಗಳಾಗಿ ಇವೆಯೆಂದು ಹೇಳಬಹುದು. ಮೊದಲು ಸ್ಥೂಲ ಯಜ್ಞ (ಕಾಣಿಸುವ ಯಜ್ಞ) ಒಂದು ವಿಧವಾದಾಗ, ಅದರಲ್ಲಿ ಎಷ್ಟೋ ವಿಧಗಳಾಗಿ ಯಜ್ಞಗಳು ಇವೆ. ಯಜ್ಞ ಎಂದರೆ ನಾಶ ಮಾಡುವುದೆಂದು ಮೊದಲೇ ತಿಳಿದುಕೊಂಡಿದ್ದೇವೆ. ಅಗ್ನಿಯಿಂದ ವಸ್ತುಗಳು ಸುಟ್ಟುಹೋದರೂ,

ಬಾಂಬುಗಳಿಂದ ಮನುಷ್ಯರು ಸತ್ತುಹೋದರೂ, ಹಿಟ್ಟಿನ ಗಿರಣಿಯಲ್ಲಿ ಕಾಳು ಹಿಟ್ಟಾಗಿ ಬದಲಾದರೂ, ಸಿಡಿಲು ಬಡಿದು ಕುರಿಗಳು ಸತ್ತುಹೋದರೂ, ವಿಷಕ್ಕೆ ಹುಳಗಳು ಪೂರ್ತಿಯಾಗಿ ಮರಣಿಸಿದರೂ, ಗಾಳಿಗೆ ಗಿಡಗಳು ನೆಲಕ್ಕುರುಳಿ ನಾಶವಾದರೂ ಮೊದಲಾದ ಕಾಣಿಸುವ ವಿನಾಶಕರ ಕಾರ್ಯಗಳೆಲ್ಲವೂ ಕಾಣಿಸುವ (ಸ್ಥೂಲ) ಯಜ್ಞಗ್ಗಳೆಂದೇ ಹೇಳಬೇಕು. ಪದಾರ್ಥವಾಗಲೀ, ವಸ್ತುಗಳಾಗಲೀ, ಜೀವವಿರುವುದಾಗಲಿ, ಜೀವವಿಲ್ಲದೇ ಇರುವುದಾಗಲೀ ನಾಶವಾದಾಗ ಅದು ಕಾಣಿಸುವ ಯಜ್ಞವಾಗುತ್ತದೆ. ಆದರೆ ಕುಣಿ ತೆಗೆದು, ಕುಂಡವೆಂದು ಹೆಸರನ್ನಿಟ್ಟು ಅದೇ ಕೆಲಸವಾಗಿ ವಸ್ತುಗಳನ್ನೂ, ವಸ್ತ್ರಗಳನ್ನೂ, ಪದಾರ್ಥಗಳನ್ನೂ, ಹಣ್ಣುಗಳನ್ನೂ, ಎಣ್ಣೆಗಳನ್ನೂ, ಲೋಹಗಳನ್ನೂ, ಕ್ರಮವಾದ ಕೆಲಸದಂತೆ ಮಂತ್ರಗಳನ್ನು ಹೇಳುತ್ತಾ ಸುಟ್ಟುಹಾಕುವ ಕೆಲಸವನ್ನು ಮಾತ್ರವೇ ಯಜ್ಞವೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ. ಉಳಿದ ವಿನಾಶಕರ ಕಾರ್ಯಗಳನ್ನು ಯಾರೂ ಯಜ್ಞಗಳಾಗಿ ಗುರುತಿಸಲಿಲ್ಲ. ಕಾಣಿಸುವ ನಾಶ ಕಾರ್ಯಗಳೇ ಯಜ್ಞಗಳಾಗಿ ಯಾರಿಗೂ ತಿಳಿಯದೇ ಇರುವಾಗ, ಕಾಣಿಸದ ಯಜ್ಞಗಳಿವೆಯೆಂದು ಯಾರೂ ಕನಸಲ್ಲೂ ಸಹ ಅಂದುಕೊಳ್ಳುವುದಿಲ್ಲ. ಒಟ್ಟಿನಲ್ಲಿ ಯಜ್ಞ ಕುಂಡಗಳನ್ನು ಮಾಡಿ, ಮಂತ್ರಗಳನ್ನು ಉಚ್ಚರಿಸುತ್ತಾ, ಬ್ರಾಹ್ಮಣರು ಮಾಡುವ ಕಾರ್ಯ ಒಂದು ಮಾತ್ರವೇ, ಈದಿನ ಎಲ್ಲರಿಗೂ ತಿಳಿದಿರುವ ಯಜ್ಞವಾಗಿ ಇದೆ. ಇದರಿಂದ ಈದಿನ ಭೂಮಿ ಮೇಲೆ ಯಜ್ಞವೆಂದರೆ ಒಂದೇ ಎಂದು, ಕಾಣಿಸುವ ಒಂದು ಯಜ್ಞ ಹೊರತು ಬೇರೆ ಯಜ್ಞಗಳೆನ್ನುವವು ಇವೆಯೆಂದು ಯಾರಿಗೂ ತಿಳಿಯದು. ಯಜ್ಞವೆಂದರೆ ಅಗ್ನಿ ಇರುತ್ತದೆಂದು, ಯಜ್ಞವನ್ನು ಮಾಡುವ ಋತ್ವಿಕರು ಇರುತ್ತಾರೆಂದು, ಯಜ್ಞದ ಹತ್ತಿರ ವೇದ ಮಂತ್ರಗಳು ಓದುತ್ತಿರುವ ರೆಂದು, ಯಜ್ಞವನ್ನು ಮಾಡುವವರು ಋತ್ವಿಕರಾದಾಗ ಮಾಡಿಸುವವರು ಧನಿಕರೆಂದು, ಯಜ್ಞ ಯಾವುದೋ ಒಂದು ಲಾಭಕ್ಕೋಸ್ಕರ ಮಾಡಿಸುತ್ತಿರುವರೆಂದು, ಯಜ್ಞ ಮಾಡುವುದರಿಂದ ಮಾಡಿಸಿದವರ ಕೋರಿಕೆ ಈಡೇರುತ್ತದೆಂದು, ಯಜ್ಞ ಎಷ್ಟೋ ಖರ್ಚಿನಿಂದ ಕೂಡಿಕೊಂಡಿದೆ ಎಂದು ಈದಿನ ಎಲ್ಲರಿಗೂ ತಿಳಿದ ಸತ್ಯ.

వాస్తవక్కె యజ్ఞగళు కాణిసువవు, కాణిసదిరువవు ఇరువాగ, కాణిసువవుగళల్లియే ఎల్లవన్నూ గురుతిసదే ఒందే ఒందు యజ్ఞ గురుతిసిరువుదు ఇందిన విషయవల్ల. సుమారు కలియుగద ఆరంభదింద ఇరువుదల్లదే ద్వాపరయుగద అంత్యకాలదల్లి సహ బహళ జన ఒందు యజ్ఞవన్నే గురుతిసిద్దారెందు తిళియుత్తిదె. ద్వాపరయుగద కొనెయల్లి ఎల్లరిగూ ఒందే ఒందు యజ్ఞ తిళిదు ఎల్లరూ అదన్నే ఆచరిసుత్తా, కాణిసువ యజ్ఞగళు ఎష్టో ఇవె ఎందు తిళియదే హోగువుదల్లదె, కాణిసద యజ్ఞగళన్ను ఎష్టు మాత్రవూ తిళియద స్థితియల్లి ప్రజెగళు, సాధుగళు, సన్యాసిగళు, స్వామీజిగళు, గురుగళు ఎల్లరూ ఇరుత్తిద్దరు. యజ్ఞగళు స్థూల, సూక్ష్మవే అల్లదే ధర్మయుక్తవాదవు, అధర్మయుక్తవాదవెందు ఎరడు విధగళాగి ఇరువుదరింద, మనుష్య ఎల్లవన్ను బిట్టు ఒందే ఒందు స్థూల యజ్ఞవన్ను తిళిదు, ఉళిదవు యావువూ తిళియద స్థితియల్లి ఇరువుదు పూర్తి అధర్మమట్టదల్లి ఇదెయెందు గురుతిసిద దేవరు, ద్వాపరయుగద కొనెయల్లి భగవద్గీతెయన్ను బోధిసి, అదరల్లి యజ్ఞగళన్ను కురితు హేళువుదు నడెదిదె.

యజ్ఞ ఎందరె సుడువుదు ఎందూ, ఇరువుదన్ను ఇల్లదే మాడువుదెందు, నాశ మాడువుదెందు హేళువుదే యజ్ఞవొందర అర్థవెందు హేళికొండిద్దేవల్లవే! అంతహదరల్లి కెలవరు యజ్ఞవన్ను మాడుత్తా, యాగవన్ను మాడుత్తిద్దేవె అన్నువుదు నడెదిదె. హాగె హేళువుదరల్లి బేరె యావుదాదరూ అర్థవిదెయా? ఎందు కెలవరు కేళబహుదు. అదక్కె ఉత్తరవన్ను నోడిదరె ఈ విధవాగి ఇదె. జప తపగళు అన్నువ పదవన్ను నావు కేళిరుత్తేవె. జప యావ అర్థవన్ను కొడుత్తిదెయో, తపవూ సహ అదే అర్థవన్ను తిళిసుత్తిదె. అదే

ವಿಧವಾಗಿ ವ್ರತ ಕ್ರತುಗಳು, ಯಜ್ಞ ಯಾಗಗಳು ಅನ್ನುವ ಮಾತುಗಳು ಇವೆ. ಜಪ ತಪಗಳು ಎರಡೂ ಒಂದೇ ಅರ್ಥವನ್ನು ಹೊಂದಿರುವ ಹಾಗೆ, ವ್ರತ ಕ್ರತುಗಳು, ಯಜ್ಞಯಾಗಗಳು ಒಂದೇ ಅರ್ಥವನ್ನು ಹೊಂದಿವೆ. ಆದರೇ ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ಸ್ವಲ್ಪ ಸಮಯ ಮಾಡುವುದನ್ನು ಜಪವೆಂದೂ, ಬಹಳ ಕಾಲ ಮಾಡುವುದನ್ನು ತಪಸ್ಸು ಎಂದೂ ಹೇಳುವುದು ನಡೆಯುತ್ತಿದೆ. ಜಪ ತಪಗಳಲ್ಲಿ ಕೆಲಸ ಒಂದೇ ಆದರೂ ಅವುಗಳನ್ನು ಮಾಡುವ ಕಾಲದ ಸಮಯವನ್ನನುಸರಿಸಿ ಹಾಗೆ ಹೇಳುವುದು ನಡೆಯುತ್ತಿದೆ. ಉದಾಹರಣೆಗೆ ಒಬ್ಬ ವ್ಯಕ್ತಿ ಗಂಟೆ  ಸಮಯ ಧ್ಯಾನವನ್ನು ಮಾಡಿದರೆ ಅವನನ್ನು ಜಪ ಮಾಡಿದ್ದಾನೆಂದು ಹೇಳಬಹುದು, ಹಾಗೇ ಅವನು ಒಂದು ದಿನವೆಲ್ಲವೂ ಜಪಿಸಿದರೆ ಅಥವಾ ಧ್ಯಾನವನ್ನು ಮಾಡಿದರೆ ಆಗ ಅವನನ್ನು ತಪವನ್ನು ಮಾಡಿದ್ದಾನೆಂದು ಹೇಳಬಹುದು. ಹಾಗೇ ಕೆಲವು ಸಮಯ ಮಾಡುವ ಆರಾಧನೆಯನ್ನು ವ್ರತ ಅನ್ನುತ್ತೇವೆ. ಕೆಲವು ದಿನಗಳು ಮಾಡುವ ಆರಾಧನೆಯನ್ನು ಕ್ರತುವು ಅನ್ನುತ್ತೇವೆ. ಹಾಗೇ ಒಂದು ದಿನದಲ್ಲೇ ಮಾಡುವ ಅಗ್ನಿ ಹೋತ್ರವನ್ನು ಯಜ್ಞ ಅನ್ನುತ್ತೇವೆ. ಕೆಲವು ದಿನಗಳು ಮಾಡುವುದನ್ನು ಯಾಗ ಅನ್ನುತ್ತೇವೆ. ಜಪ ತಪಗಳು, ವ್ರತಕ್ರತುಗಳು, ಯಜ್ಞ ಯಾಗಗಳು ಜೋಡಿ ಪದಗಳಾಗಿ ಇದ್ದರೂ ಒಂದೇ ಕೆಲಸದಲ್ಲಿನ ಕಾಲ ವ್ಯತ್ಯಾಸವನ್ನು ಅನುಸರಿಸಿ ಇರುತ್ತದೆ.

ಪೂರ್ವ ತ್ರೇತಾಯುಗದಲ್ಲಿ ದಶರಥನು ಪುತ್ರಕಾಮೇಷ್ಠಿ ಯಾಗ ಮಾಡಿದ್ದಾನೆಂದು, ಆ ಯಾಗ ಫಲಿತವಾಗಿ ಆತನಿಗೆ ಸಂತತಿ ಆಗಿದೆಯೆಂದು ರಾಮಾಯಣದಲ್ಲಿ ಹೇಳುವಾಗ ಕೇಳಿದ್ದೇವೆ. ಯಾಗ ಅನ್ನುವ ಮಾತನ್ನು ಅನುಸರಿಸಿ ಅದು ಕೆಲವು ದಿನಗಳು ಮಾಡಿರುವುದೆಂದು ಅರ್ಥವಾಗುತ್ತಿದೆ. ಎಲ್ಲರಿಗೂ ಚೆನ್ನಾಗಿ ತಿಳಿದಿರುವುದು ದಶರಥನು ಮಾಡಿರುವ ಪುತ್ರಕಾಮೇಷ್ಠಿ ಯಾಗ. ಯಾಗ ಅನ್ನುವ ಹೆಸರಲ್ಲೇ ಅವರು ಆ ದಿನ ಯಾವ ಉದ್ದೇಶದಿಂದ ಆ ಯಾಗ ಮಾಡಿದ್ದಾರೊ ತಿಳಿಯುವಹಾಗೆ ಪುತ್ರಕಾಮೇಷ್ಠಿ ಎಂದು ಇದೆ. ಪುತ್ರಕಾಮೇಷ್ಠಿ ಎಂದರೆ ಪುತ್ರರನ್ನು ಕಾಂಕ್ಷಿಸಿ (ಕುಮಾರರು ಬೇಕೆಂದು) ಎಂದು

ಅರ್ಥವನ್ನು ತಿಳಿಸುತ್ತಿದೆ. ತನಗೆ ಸಂತತಿ ಇಲ್ಲದ ಕಾರಣವನ್ನು ಅಂದಿನ ಕಾಲದಲ್ಲಿ ಮಹರ್ಷಿಗಳ ಸಲಹೆಯನ್ನು ಅನುಸರಿಸಿ, ಸಂತತಿ ಗೋಸ್ಕರ ಪುತ್ರಕಾಮೇಷ್ಠಿ ಅನ್ನುವ ಯಾಗವನ್ನು ದಶರಥನು ಮಾಡಿದ್ದಾನೆಂದು, ಯಾಗ ಮಾಡುವುದರಿಂದ ದಶರಥನಿಗೆ ಪುತ್ರರು ಜನ್ಮಿಸಿದ್ದಾರೆಂದು ರಾಮಾಯಣದಲ್ಲಿ ಬರೆಯಲಾಗಿದೆ. ಇದನ್ನನುಸರಿಸಿ ಯಜ್ಞಯಾಗಾದಿಗಳು ಮನುಷ್ಯನು ತನ್ನ ಕೋರಿಕೆಗಳಿಗಾಗಿ ಮಾಡುತ್ತಿದ್ದಾನೆಂದು, ಯಜ್ಞ ಯಾಗಾದಿಗಳು ಪ್ರಪಂಚ ಕೋರಿಕೆಗಳ ನಿಮಿತ್ತವಾಗಿ ಏರ್ಪಡಿಸಿರುವವೆಂದು ತಿಳಿಯುತ್ತಿದೆ. ಯಜ್ಞಗಳ ವಿಷಯದಲ್ಲಿ ಧರ್ಮ, ಅಧರ್ಮ ಒಂದರ ವಿಷಯ ಮನುಷ್ಯನಿಗೆ ತಿಳಿಯದೆ ಇದ್ದರೂ, ಯಜ್ಞ ಮಾಡುವುದರಿಂದ ಕೋರಿಕೆಗಳು ಈಡೇರುತ್ತವೆಂದು ಮಾತ್ರ ಅರ್ಥವಾಗುತ್ತಿದೆ. ದೇವರು ಭಗವದ್ಗೀತೆಯಲ್ಲಿಯೂ ಸಹ ಇಂತಹ ಯಜ್ಞಗಳಿಂದ ನನ್ನನ್ನು ತಿಳಿಯುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ! ಮನುಷ್ಯ ಹೊರಗೆ ಮಾಡುವ ಸ್ಥೂಲ ಯಜ್ಞಗಳಿಂದ ದೇವರು ತಿಳಿಯುವುದಿಲ್ಲವೆಂದು ನೆನಪಿನಲ್ಲಿಟ್ಟುಕೊಳ್ಳಬೇಕು. ಇನ್ನೂ ವಿವರವಾಗಿ ಹೇಳಿಕೊಂಡರೆ ಕರ್ಮವನ್ನು ಸಂಪಾದಿಸಿಡುವ ಯಜ್ಞಗಳಿಂದ ದೇವರು ತಿಳಿಯುವುದಿಲ್ಲವೆಂದು ತಿಳಿಯುತ್ತಿದೆ.

ನಾವು ಆರಂಭದಲ್ಲೇ ಯಜ್ಞಗಳನ್ನು ಮೂರು ವಿಧಗಳಾಗಿ ವಿಭಜನೆ ಮಾಡಿಕೊಂಡಿದ್ದೇವೆ. ನಂತರ ಅವುಗಳನ್ನು ಎರಡು ವಿಧಗಳಾಗಿ ಹೇಳಿ ಕೊಂಡಿದ್ದೇವೆ. ಎರಡು ವಿಧಗಳಲ್ಲಿ ಒಂದು ಕರ್ಮಸಾಹಿತ್ಯವನ್ನು ಮಾಡುವುದು. ಎರಡನೆಯದು ಕರ್ಮರಾಹಿತ್ಯವನ್ನು ಮಾಡುವುದಾಗಿ ಹೇಳಿಕೊಂಡಿದ್ದೇವೆ. ಕರ್ಮ ರಹಿತವನ್ನು ಮಾಡುವ ಯಜ್ಞಗಳಿಂದ ಕೊನೆಗೆ ದೈವವನ್ನು ತಿಳಿಯಬಹುದು. ಕರ್ಮ ಸಹಿತವನ್ನು ಕಲ್ಪಿಸುವ ಯಜ್ಞಗಳಿಂದ ದೈವವನ್ನು ತಿಳಿಯಲಾರೆವು. ಮನುಷ್ಯರಿಗೆ ತಿಳಿದ ಯಜ್ಞಗಳೆಲ್ಲವೂ ಕರ್ಮವನ್ನು ವೃದ್ಧಿ ಮಾಡುವವೇ. ಆದ್ದರಿಂದ ಅಂತಹ ಯಜ್ಞಗಳನ್ನು ಅಧರ್ಮ ಯಜ್ಞಗಳೆಂದು ಭಗವದ್ಗೀತೆಯಲ್ಲಿ ಹೇಳುವುದು ನಡೆದಿದೆ. ಕೋರಿಕೆಗಳ ನಿಮಿತ್ತ ದಶರಥನು

ಮಾಡಿದ ಯಜ್ಞವೂ ಸಹ ಅಧರ್ಮಯುಕ್ತವಾದದ್ದೆಂದು ತಿಳಿಯುತ್ತಿದೆ. ಶ್ರೀರಾಮನ ತಂದೆ ದಶರಥನು, ಪುತ್ರಸಂತತಿಗೋಸ್ಕರ ಪುತ್ರಕಾಮೇಷ್ಠಿ ಯಾಗವನ್ನು ಮಾಡಿರುವಾಗ, ದಶರಥನ ಕುಮಾರನಾದ ಶ್ರೀರಾಮನು ರಾಜ್ಯಾಕಾಂಕ್ಷೆಯಿಂದ ಅಶ್ವಮೇಧ ಯಾಗವನ್ನು ಮಾಡಿದ್ದಾನೆ. ಕೆಲವರು ರಾಜರು ತಮ್ಮ ರಾಜ್ಯದಲ್ಲಿ ಮಳೆ ಚೆನ್ನಾಗಿ ಬರಬೇಕೆಂದು ವರುಣಯಜ್ಞ(ವರುಣಯಾಗವನ್ನು) ಮಾಡಿದ್ದಾರೆ. ಕೆಲವರು ಪ್ರಪಂಚಶಾಂತಿಗೋಸ್ಕರ ವಿಶ್ವಶಾಂತಿ ಯಜ್ಞವನ್ನು ಮಾಡಿದ್ದಾರೆ. ದ್ವಾಪರ ಯುಗದ ಅಂತ್ಯ, ಕಲಿಯುಗದ ಆರಂಭದಲ್ಲಿ ಪರೀಕ್ಷಿತ ರಾಜನ ಕುಮಾರನಾದ ಜನಮೇಜಯನು, ತನ್ನ ತಂದೆ ಮರಣಕ್ಕೆ ಕಾರಣವಾದ ಹಾವುಗಳನ್ನು ಇಲ್ಲದೇ ಮಾಡುವುದಕ್ಕೆ, ಸರ್ಪಯಾಗವನ್ನು ಮಾಡಿದಹಾಗೆ ಚರಿತ್ರೆ ಇದೆ. ಈ ವಿಧವಾಗಿ ಗತದಲ್ಲಿ ಎಷ್ಟೋ ಜನ ತಮ್ಮ ಕೋರಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಯಜ್ಞಗಳನ್ನು ಮಾಡಿರುವಾಗ, ಈದಿನವೂ ಸಹ ಅನೇಕ ಕಡೆ ಅನೇಕ ಸಂದರ್ಭಗಳಲ್ಲಿ ಪ್ರಪಂಚ ಕೋರಿಕೆಗಳ ನಿಮಿತ್ತವೇ ಯಜ್ಞಗಳನ್ನು ಮಾಡುತ್ತಿದ್ದಾರೆ. ಪೂರ್ವದಲ್ಲಿ ಯಜ್ಞಗಳನ್ನು ಮಾಡುವ ಅಭ್ಯಾಸ ಭಾರತದೇಶದಲ್ಲಿ ಮಾತ್ರವೆ ಇರುತ್ತಿತ್ತು. ಪ್ರಸ್ತುತ ಕಾಲದಲ್ಲಿ ವಿದೇಶಗಳಲ್ಲಿ ವಿದೇಶೀಯರು ಸಹಿತ ಯಜ್ಞಗಳನ್ನು ತಿಳಿದುಕೊಂಡು, ಅವರ ಕೋರಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಭಾರತದೇಶದಿಂದ ಯಜ್ಞಗಳನ್ನು ಮಾಡುವ ಋತ್ವಿಕರನ್ನು ಆಹ್ವಾನಿಸಿಕೊಂಡು ಯಜ್ಞಗಳನ್ನು ಮಾಡುತ್ತಿದ್ದಾರೆ.

ಯಜ್ಞಗಳನ್ನು ಮಾಡುವವರಿಗೆ ಪ್ರತ್ಯೇಕ ಪದವನ್ನು ಉಪಯೋಗಿಸಿ ಋತ್ವಿಕರು ಅನ್ನುತ್ತಾರೆ. ಯಜ್ಞಗಳನ್ನು ಕರ್ಮಸಹಿತವನ್ನು ಮಾಡುವವು ಎಂದೂ, ಕರ್ಮರಹಿತ ಮಾಡುವವೆಂದು ಎರಡು ವಿಧಗಳಾಗಿ ಇವೆಯೆಂದು ಹೇಳಿ ಕೊಂಡಿದ್ದೇವೆ. **ಬ್ರಹ್ಮಜ್ಞಾನಿಗಳು ಕರ್ಮರಹಿತ ಮಾಡುವ ಯಜ್ಞಗಳನ್ನು ಮಾಡುತ್ತಿರುವಾಗ, ಬಾಹ್ಯ ಜ್ಞಾನಿಗಳು ಕರ್ಮವನ್ನು ಉಂಟುಮಾಡುವ ಯಜ್ಞಗಳನ್ನು ಮಾಡುತ್ತಿರುವರು**. ಯಜ್ಞಗಳನ್ನು ಮಾಡಿಸುವವರು ಯಾರಾದರೂ, ಯಜ್ಞ ಕಾರ್ಯಗಳನ್ನು ಮಾಡುವವರು ಋತ್ವಿಕರು. ಊರಿಗೆ ಹೋಗಬೇಕಾದವರು,

ಪ್ರಯಾಣ ಮಾಡುವವರು ಯಾರಾದರಾಗಲಿ ಬಸ್ಸನ್ನು ನಡೆಸುವವನು ಮಾತ್ರ ಡ್ರೈವರ್ ಅಂದಹಾಗೆ, ಯಜ್ಞಗಳನ್ನು ಮಾಡಿಸುವವರು ಯಾರಾದರೂ ಅಗಬಹುದು. ಆದರೆ ಯಜ್ಞಕಾರ್ಯಗಳನ್ನು ಋತ್ವಿಕರೇ ಮಾಡುವರು. ಋತ್ವಿಕರು ವೇದಮಂತ್ರಗಳು ಓದುವವರಾಗಿ, ಶುಚಿ ಶುಭ್ರತೆ ಹೊಂದಿರುವವರಾಗಿ ಬ್ರಾಹ್ಮಣರಾಗಿರುವರು. ಪ್ರಯಾಣಿಕರು ಇಲ್ಲದೇ ಹೋದರೆ ಬಸ್ಸು ನಡೆಯುವುದಿಲ್ಲ, ಡ್ರೈವರ್‌ಗೆ ಕೆಲಸ ಇರುವುದಿಲ್ಲ. ಬಸ್ಸು ನಡೆಸುವುದೇ ಅಭ್ಯಾಸವಾಗಿರುವ ಡ್ರೈವರ್ ಬೇರೆ ಕೆಲಸವನ್ನು ಮಾಡಲಾರನು. ಆದ್ದರಿಂದ ತನ್ನ ಕೆಲಸಕ್ಕೋಸ್ಕರ ಪ್ರಯಾಣಿಕರನ್ನು ತಯಾರು ಮಾಡಬೇಕಾದ ಅವಶ್ಯ ಬಂದಿದೆ. ಹಾಗೇ ಯಜ್ಞಗಳನ್ನು ಮಾಡುವುದೇ ಕೆಲಸವಾಗಿ ಇಟ್ಟುಕೊಂಡ ಕೆಲವರು, ಅದೇ ಕೆಲಸವಾಗಿ ಪ್ರಜೆಗಳಿಗೆ ಯಜ್ಞಗಳನ್ನು ಕುರಿತು ಬೋಧಿಸಿ, ಯಜ್ಞಗಳಿಂದ ಕೆಲವು ಕಾರ್ಯಗಳು ಈಡೇರುತ್ತವೆಂದು, ಯಾವ ಕಾರ್ಯವಾದರೂ ಸಫಲವಾಗುವುದಕ್ಕೆ ಯಜ್ಞಗಳನ್ನು ಮಾಡಬಹುದೆಂದು ತಿಳಿಸುವುದರಿಂದ, ಪ್ರಜೆಗಳು ತಮ್ಮ ಕೋರಿಕೆಗಳ ನಿಮಿತ್ತ ಯಜ್ಞಗಳನ್ನು ಮಾಡುವುದಕ್ಕೆ ತಯಾರಾಗುತ್ತಿದ್ದಾರೆ. ಮನುಷ್ಯರ ಆಸೆಗಳಿಂದ ಯಜ್ಞಗಳು ಅಲ್ಲಲ್ಲಿ ಋತ್ವಿಕರು ಮಾಡುತ್ತಿದ್ದಾರೆ. ಮನುಷ್ಯರ ಆಸೆಗಳನ್ನನುಸರಿಸಿ ಹೊಸ ಯಜ್ಞಗಳನ್ನು ಸೃಷ್ಠಿಸಿ ಅವುಗಳಿಗೆ ಹೊಸ ಹೆಸರುಗಳು ಇಡುವುದು ಸಹ ನಡೆದಿದೆ. ಮನುಷ್ಯರ ಕೋರಿಕೆಗಳನ್ನು ನೆಪದಿಂದ ತೆಗೆದುಕೊಂಡು ಋತ್ವಿಕರಾದವರು ಎಲ್ಲೂ ಇಲ್ಲದ ಯಜ್ಞಗಳನ್ನು ತಯಾರುಮಾಡಿ, ಅವುಗಳಿಗೋಸ್ಕರ ಹೆಚ್ಚು ಹಣವನ್ನು ಖರ್ಚು ಮಾಡಿಸುತ್ತಿದ್ದಾರೆ. ಯಜ್ಞದಲ್ಲಿ ಖರ್ಚಾಗುವುದೆಲ್ಲಾ ಯಜ್ಞಗಳನ್ನು ಮಾಡಿಸುವವರು ನಿಭಾಯಿಸುವುದರಿಂದ, ಋತ್ವಿಕರು ತಮ್ಮ ಇಷ್ಟ ಬಂದ ಪದ್ಧತಿಯಲ್ಲಿ ಖರ್ಚು ಮಾಡಿಸುತ್ತಿದ್ದಾರೆ. ಎಷ್ಟು ಖರ್ಚು ಹೆಚ್ಚಾದರೆ ಅಷ್ಟು ದೊಡ್ಡ ಯಜ್ಞವಾಗಿ ಪ್ರಜೆಗಳು ಅಂದುಕೊಳ್ಳುವರೆಂದು, ದೊಡ್ಡ ಯಜ್ಞಕ್ಕೆ ಹೆಚ್ಚು ಫೀಜು ತೆಗೆದುಕೊಳ್ಳಬಹುದೆಂದು ಯಜ್ಞಗಳಲ್ಲಿ ಅನವಶ್ಯವಾಗಿ ಖರ್ಚು ಮಾಡಿಸುತ್ತಿದ್ದಾರೆ.

ಎಷ್ಟೋ ಬೆಲೆ ಬಾಳುವ ಬೀಜಗಳನ್ನು ಭೂಮಿಯೊಳಗೆ ಬಿತ್ತಿದಾಗ ಅವು ನಷ್ಟವಾಗಿಯೇ ಕಾಣಿಸಿದರೂ, ನಂತರ ಮೂರು ನಾಲ್ಕು ತಿಂಗಳಿಗೆ ಬಿತ್ತಿದ ಬೀಜಗಳು ಬೆಳೆ ರೂಪದಲ್ಲಿ ಎಷ್ಟೋ ಲಾಭವನ್ನು ಕೊಡುತ್ತವೆಂದು, ಋತ್ವಿಕರು ಹೇಳುವುದರಿಂದ ಕೆ.ಜಿ ತುಪ್ಪವನ್ನು ಯಜ್ಞಕುಂಡದಲ್ಲಿ ಹಾಕಬೇಕಾದಾಗ, ಹೆಚ್ಚಾಗಿ ಹಾಕಿದರೆ ಹೆಚ್ಚಿನ ಲಾಭ ಬರುತ್ತದೆಂದು, ಡಬ್ಬಿ ತುಪ್ಪವನ್ನು ಹಾಕುವವರೂ ಸಹಾ ಇದ್ದಾರೆ. ಯಜ್ಞ ಕುಂಡದಲ್ಲಿ ರೇಷ್ಮೆ ವಸ್ತ್ರಗಳನ್ನು, ಬಂಗಾರವನ್ನು, ಗಂದಧ ಚೆಕ್ಕೆಗಳನ್ನು ಸುಡುಸುವವರೂ ಸಹ ಇದ್ದಾರೆ. ಹಾಗೆ ಮಾಡುವುದರಿಂದ ಬೆಲೆಯುಳ್ಳ ವಸ್ತುಗಳನ್ನು, ಬೆಲೆಯುಳ್ಳ ಆಹಾರ ಪದಾರ್ಥಗಳನ್ನು, ಬೆಲೆಯುಳ್ಳ ವಸ್ತ್ರಗಳನ್ನು ಕಳೆದುಕೊಳ್ಳುತ್ತಿದ್ದಾರೆ. ಹಾಗೇ ಒಂದು ಯಜ್ಞದಲ್ಲಿ ಹೆಚ್ಚಿನ ವೆಚ್ಚದಲ್ಲಿ ಖರ್ಚು ಮಾಡಿದವರಿಗೆ ಅದಕ್ಕೆ ತಕ್ಕಹಾಗೆ ಲಾಭ ಬರುತ್ತಿದೆಯಾ ಎಂದು ಪ್ರಶ್ನಿಸಿಕೊಂಡು ನೋಡುವುದಾದರೆ, ಪೂರ್ವದಲ್ಲಿ ಯಜ್ಞಗಳನ್ನು ಮಾಡಿದವರಿಗೆ ಅವರ ಕೆಲಸಗಳು ನೆರವೇರಿ ಲಾಭ ಬಂದಿದೆಯೇನೋ ಆದರೆ, ಇಂದಿನ ಕಾಲದಲ್ಲಿ ಯಜ್ಞಗಳಿಂದ ಫಲಿತ ಬರುತ್ತದೆನ್ನುವ ನಂಬಿಕೆ ಇಲ್ಲ. ಪೂರ್ವಕಾಲದಲ್ಲಿ ಯಜ್ಞಗಳನ್ನು ಮಾಡುವುದರಿಂದ ಕೆಲಸಗಳು ನಡೆಯುವುದು, ಲಾಭ ಬರುವುದು, ಕೋರಿಕೆಗಳು ಈಡೇರುವುದು ನಡೆದಾಗ, ಪ್ರಸ್ತುತ ಕಾಲದಲ್ಲಿ ಕೆಲವು ಯಜ್ಞಗಳಿಂದ ಮನುಷ್ಯ ನಷ್ಟಹೋಗುತ್ತಿದ್ದಾನೆ ಹೊರತು ಲಾಭಪಡುತ್ತಿಲ್ಲ. ಯಾವ ಕೆಲಸದ ನಿಮಿತ್ತ ಯಜ್ಞ ಮಾಡಿದರೆ ಆ ಕೆಲಸ ಈಡೇರುತ್ತಿಲ್ಲ. ಪೂರ್ವದಲ್ಲಿ ಪುತ್ರರಿಗೋಸ್ಕರ ಯಜ್ಞವನ್ನು ಜೋರಾಗಿ ಮಾಡಿರುವುದರಿಂದ ದಶರಥನಿಗೆ ಪುತ್ರರು ಹುಟ್ಟಿದ್ದಾರೆ ಅಲ್ಲವೆ! ಅಂತಹ ಕಾರ್ಯ ನೆರವೇರಿದಾಗ, ಇಂದಿನ ಯಜ್ಞಗಳಿಂದ ಸಣ್ಣ ಕಾರ್ಯವೂ ಸಹ ಈಡೇರುವುದಿಲ್ಲವೇ? ಎಂದು ಪ್ರಶ್ನಿಸಿಕೊಂಡು ನೋಡಿದರೆ ಪೂರ್ವದಲ್ಲಿ ನಡೆದಹಾಗೆ ಈಗ ನಡೆಯುತ್ತದೆನ್ನುವ ನಂಬಿಕೆ ಇಲ್ಲ. ಯಜ್ಞವನ್ನು ಪೂರ್ವಕಾಲದಲ್ಲಿ ಹೇಗೆ ಮಾಡಿದ್ದಾರೊ ಹಾಗೇ ಮಾಡಿದರೂ, ಕೆಲವು ಕಡೆ ಕೆಲವು ಯಜ್ಞಗಳಲ್ಲಿ ಸ್ವಲ್ಪ ಫಲಿತ ಕಾಣಿಸಿದರೂ, ಕೆಲವು ಕಡೆ ಯಾವ ಕಾರಣದಿಂದಲೂ ಫಲಿತ ಸಿಗುತ್ತಿಲ್ಲ. ಯಜ್ಞ ಮಾಡಿದರೆ ಯಜ್ಞವನ್ನು ಮಾಡಿಸಿದವನಿಗೆ ಅವನು ಆಶಿಸಿದ ಫಲಿತ ಪೂರ್ವದಲ್ಲಿ ಸಿಕ್ಕಿದ ಹಾಗೆ ಪ್ರಸ್ತುತ

ಕಾಲದಲ್ಲಿ ಏಕೆ ಸಿಗುತ್ತಿಲ್ಲ? ಪೂರ್ವದಲ್ಲಿ ಕೋರಿಕೆಗಳು ಈಡೇರಿದ ಹಾಗೆ ಇಂದಿನ ಕಾಲದಲ್ಲಿ ಕೆಲವರ ಕೋರಿಕೆಗಳು ಏಕೆ ಈಡೇರುತ್ತಿಲ್ಲ? ಎಂದು ಆಲೋಚಿಸಿ ನೋಡಿದರೆ ಕೆಲವು ನಮಗೆ ತಿಳಿಯದ ಸತ್ಯಗಳು ಹೊರಬೀಳುತ್ತಿವೆ.

ಯಜ್ಞಗಳು ಸ್ಥೂಲವಾಗಿ ಕಾಣಿಸುವವೇ ಆದರೂ, ಆ ಯಜ್ಞಗಳಲ್ಲಿ ಸ್ಥೂಲವಾಗಿ ಎಷ್ಟೋ ಹಣವನ್ನು, ಎಷ್ಟೋ ವಸ್ತುಗಳನ್ನು, ಎಷ್ಟೋ ತುಪ್ಪವನ್ನು ಕಳೆದುಕೊಂಡರೂ, ಯಜ್ಞಗಳಲ್ಲಿ ಏನು ವಿನಿಯೋಗಿಸಿದರೂ, ಫಲ ಕಾಣಿಸದಂತೆ ಬರುತ್ತದೆ. ಇಲ್ಲಿ ಒಂದು ಸೂತ್ರವನ್ನು ನೋಡೋಣ. ಕಾಣಿಸಿದರೂ, ಕಾಣಿಸದಿದ್ದರೂ ಒಂದು ಕೆಲಸ ನಡೆದಿದೆ ಎಂದರೆ, ಅಲ್ಲಿ ಕಾಣಿಸುವ ವ್ಯಕ್ತಿಯಾಗಲಿ, ಕಾಣಿಸದ ವ್ಯಕ್ತಿಯಾಗಲಿ ಆ ಕೆಲಸವನ್ನು ಮಾಡಿರಬೇಕು ಅನ್ನುವ ಸೂತ್ರದ ಪ್ರಕಾರ, ಯಜ್ಞ ಮಾಡಿದಾಗ ಯಜ್ಞವನ್ನು ಮಾಡಿದವನ ಕೋರಿಕೆಯನ್ನು ಯಾರೋ ಒಬ್ಬರು ಈಡೇರಿಸಬೇಕು. ಯಾರು ಆ ಕೆಲಸವನ್ನು ಮಾಡುತ್ತಿದ್ದಾರೆಂದು ಪರಿಶೀಲಿಸಿದರೆ, ಬಾಹ್ಯವಾಗಿ ಮಂತ್ರಪಠನೆಯಿಂದ ಯಜ್ಞವನ್ನು ಮಾಡುವ ಪ್ರತಿಯೊಂದು ಕಡೆ, ಆ ಯಜ್ಞಕ್ಕೆ ಒಬ್ಬ ಅಧಿಪತಿ ಬಂದು ಸೇರುತ್ತಾನೆ. ಭೂಮಿಯೊಳಗೆ ಯಾರಾದರೂ ಧನವನ್ನು (ಬಂಗಾರ ಮೊದಲಾದ ಲೋಹಗಳನ್ನು) ಬಚ್ಚಿಟ್ಟಿರುವುದಾದರೆ ಆ ಸ್ಥಳದಲ್ಲಿ ಒಂದು ಸೂಕ್ಷ್ಮಶಕ್ತಿ ಬಂದು ಸೇರುತ್ತದೆ. ಆ ಸೂಕ್ಷ್ಮ ಶಕ್ತಿ ಗ್ರಹವೂ ಆಗಬಹುದು ಅಥವಾ ಭೂತವೂ ಆಗಬಹುದು. ಹಾಗೆ ಸೇರಿದ ಶಕ್ತಿ ಆ ಧನವನ್ನು ಕಾವಲು ಕಾಯುತ್ತಾ ಇರುತ್ತದೆ. ಎಂದಿಗಾದರೂ ಬಚ್ಚಿಟ್ಟಿರುವವರು ತೆಗೆದುಕೊಂಡರೆ ಅಲ್ಲಿರುವ ಶಕ್ತಿ ಏನೂ ಮಾಡುವುದಿಲ್ಲ. ಒಂದು ವೇಳೆ ಬಚ್ಚಿಟ್ಟಿರುವವರಲ್ಲದೆ ಇತರರು ಯಾರಾದರೂ ತೆಗೆದುಕೊಳ್ಳಬೇಕೆಂದುಕೊಂಡರೆ ಅಲ್ಲಿ ಕಾಯುತ್ತಿರುವ ಶಕ್ತಿ ಆತಂಕ ಮಾಡುತ್ತದೆ. ಕಾಣಿಸದ ಶಕ್ತಿಯೊಂದರ ಆತಂಕ ಯಾರಿಗೂ ಅರ್ಥವಾಗುವುದಿಲ್ಲ. ತೆಗೆದುಕೊಳ್ಳಬೇಕೆಂದು ಪ್ರಯತ್ನಿಸಿದ ಅವನನ್ನು ಭಯಪಡಿಸಿಯಾಗಲಿ, ಹೊಡೆದಾಗಲಿ ಆ ಪ್ರಯತ್ನವನ್ನು ಬಿಡುವಂತೆ ಮಾಡುತ್ತದೆ. ಕೆಲವು ಕಡೆ ಸೂಕ್ಷ್ಮಶಕ್ತಿ ಮನುಷ್ಯರನ್ನು ಸಾಯಿಸಿದ ಸಂಘಟನೆಗಳು ಸಹ ಇವೆ. ಯಾವ

ವಿಧದಲ್ಲಿ ಒಂದು ಸೂಕ್ಷ್ಮಶಕ್ತಿ ನಿಧಿ ಇರುವ ಕಡೆ ಹೇಳದೇ ಬಂದು ಸೇರುತ್ತಿದೆಯೋ, ಹಾಗೇ ಒಂದು ಯಜ್ಞ ಮಾಡುವ ಹತ್ತಿರ ಆ ಯಜ್ಞವನ್ನು ಆಧಾರ ಮಾಡಿಕೊಂಡು ಒಂದು ಸೂಕ್ಷ್ಮ ಶಕ್ತಿ ಬಂದು ಸೇರುತ್ತಿದೆ. ಎಲ್ಲಿ ಬಾಹ್ಯ ಯಜ್ಞಗಳನ್ನು ಮಾಡಿದರೂ, ಅದು ಸಣ್ಣ ಯಜ್ಞವಾದರೂ ಅಥವಾ ದೊಡ್ಡ ಯಜ್ಞವಾದರೂ ಅದಕ್ಕೆ ಯಜಮಾನನಾಗಿ ಗ್ರಹವಾಗಲಿ, ಭೂತವಾಗಲಿ ಬಂದು ಸೇರುತ್ತದೆ. ಭೂಮಿಯೊಳಗೆ ಇರುವ ನಿಧಿಗೆ ತಾನೇ ಯಜಮಾನ (ಅಧಿಪತಿ) ಎಂದು ಅಲ್ಲಿರುವ ಶಕ್ತಿ ಹೇಗೆ ಅಂದುಕೊಳ್ಳುತ್ತಿದೆಯೋ, ಅದೇ ವಿಧವಾಗಿ ಯಜ್ಞ ಮಾಡುವ ಹತ್ತಿರಕ್ಕೆ ಬಂದು ಸೇರಿದ ಶಕ್ತಿ, ಆ ಯಜ್ಞಕ್ಕೆ ತಾನೇ ಅಧಿಪತಿಯೆಂದು ಅಂದುಕೊಳ್ಳುತ್ತದೆ. ಯಜ್ಞಕ್ಕೆ ಒಂದು ಶಕ್ತಿ ಅಧಿಪತಿಯಾಗಿ ಬಂದು ಸೇರಿದೆಯೆಂದು, ಯಜ್ಞವನ್ನು ಮಾಡುವ ಋತ್ವಿಕರಿಗೂ ಸಹ ತಿಳಿಯದು.

ಯಾರು ಎಲ್ಲಿ ಯಾವ ಯಜ್ಞವನ್ನು ಮಾಡಿದರೂ, ಅಲ್ಲಿ ಯಜ್ಞವನ್ನು ಮಾಡುವವರಿಗೂ ಸಹ ತಿಳಿಯದೆ ಒಂದು ಸೂಕ್ಷ್ಮ ಶಕ್ತಿ ಬಂದು ಆ ಯಜ್ಞವನ್ನು ವೀಕ್ಷಿಸುತ್ತಾ ಇರುತ್ತದೆ. ಹಾಗೆ ಅಲ್ಲಿಗೆ ಬಂದಿರುವ ಗ್ರಹವಾಗಲೀ, ಭೂತವಾಗಲೀ ದೊಡ್ಡ ಶಕ್ತಿ ಇರುವುದಾಗಿರುತ್ತದೆ. ಇವೆಲ್ಲವೂ ದೇವರಿಗೆ ತಿಳಿಯದೇ ಯಾವುದು ನಡೆಯುತ್ತಿಲ್ಲವೆಂದು ನಿಮಗೆ ಮಧ್ಯದಲ್ಲಿ ನೆನಪಿಸುತ್ತಿದ್ದೇನೆ. ಹಾಗೆ ಬಂದಿರುವ ಸೂಕ್ಷ್ಮ ಗ್ರಹ ಅಥವಾ ಭೂತ, ಯಜ್ಞವನ್ನು ಮಾಡುವವನು ಯಾವ ಉದ್ದೇಶದಿಂದ ಮಾಡುತ್ತಿದ್ದಾನೋ ತಿಳಿದಿರುವುದಾಗಿ, ಯಜ್ಞ ಮುಗಿದ ನಂತರ ಅವನ ಕೋರಿಕೆಯನ್ನು ನೆರವೇರಿಸುತ್ತದೆ. ಈಗ "ಖಗೋಳದಲ್ಲಿನ ಭೂತಗಳು, ಗ್ರಹಗಳು ದೇವರ ಪಾಲನೆಯಲ್ಲಿ ಭಾಗವಾಗಿ, ದೈವಜ್ಞಾನವನ್ನು ಹೊಂದಿರುವವೆಂದು ನೀವೇ ಹೇಳಿದ್ದೀರ, ಅಂತಹ ಜ್ಞಾನ ತಿಳಿದ ಸೂಕ್ಷ್ಮಶಕ್ತಿಗಳು ಅಧರ್ಮಗಳಾದ ಯಜ್ಞಗಳ ಹತ್ತಿರಕ್ಕೆ ಬಂದು, ಯಜ್ಞಗಳಿಗೆ ಅಧಿಪತಿಯಾಗಿ ಇರುವುದೇನು? ಹಾಗೆ ಇರುವ ಶಕ್ತಿಗಳು ಪ್ರಪಂಚ ಕೋರಿಕೆಗಳಲ್ಲಿ ಮುಳುಗಿ ಯಜ್ಞಗಳನ್ನು ಮಾಡುವ ಮನುಷ್ಯರ ಕೋರಿಕೆಗಳನ್ನು ಈಡೇರಿಸುವುದೇನು?" ಎಂದು ಕೆಲವರು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನನ್ನ ಉತ್ತರ ಹೀಗೆ ಇದೆ. ಭಗವಂತನು ಹೇಳಿದ ಭಗವದ್ಗೀತೆಯಲ್ಲಿ ವಿಜ್ಞಾನ ಯೋಗವೆಂಬ ಅಧ್ಯಾಯದಲ್ಲಿ

***ಶ್ಲೋ॥ 20.*** ***ಕಾಮೈಸ್ತೈಸ್ತೈಹೃತ ಜ್ಞಾನಾಃ ಪ್ರಪದ್ಯಂತೇ ನ್ಯ ದೇವತಾಃ।***
***ತಂತಂ ನಿಯಮ ಮಾಸ್ಥಾಯ ಪ್ರಕೃತ್ಯಾ ನಿಯತಾ ಸ್ಸ್ವಯಾ॥***

***ಶ್ಲೋ॥ 21.*** ***ಯೊಯೊ ಯಾಂಯಾಂ ತನುಂಭಕ್ತಶ್ರದ್ಧ ಯಾರ್ಚಿತು ಮಿಚ್ಛತಿ।***
***ತಸ್ಯ ತಸ್ಯಾ ಚಲಾಂ ಶ್ರದ್ಧಾಂ ತಾ ಮೇವ ವಿದಧಾ ಮ್ಯಹಮ್॥***

***ಶ್ಲೋ॥ 22.*** ***ಸತಯಾ ಶ್ರದ್ಧ ಯಾ ಯುಕ್ತಸ್ತ ಸ್ಯಾ ರಾಧನ ಮೀಹತೇ ।***
***ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿತಾನ್॥***

ಶ್ಲೋಕಗಳಲ್ಲಿ ಇರುವ ಸಾರಾಂಶವನ್ನು ನೋಡಿದರೆ ಇಲ್ಲಿ ಬಂದಿರುವ ಪ್ರಶ್ನೆಗೆ ಉತ್ತರ ಸಿಗುತ್ತದೆ. ಅಲ್ಲಿನ ಸಾರಾಂಶ ಹೀಗೆ ಇದೆ. ಪ್ರಪಂಚ ಸಂಬಂಧವಾದ ಪಾಪಗಳನ್ನು ಸಂಪಾದಿಸಿಕೊಳ್ಳುವ ಅಜ್ಞಾನಿಗಳು ಆಸೆಗಳಲ್ಲಿ ಮುಳುಗಿರುವವರಾಗಿ, ಅವರ ಕೋರಿಕೆಗಳು ಈಡೇರುವುದಕ್ಕೆ ಇತರ ದೇವತೆಗಳನ್ನೂ, ಇತರೆ ಆರಾಧನೆಗಳನ್ನೂ, ಯಜ್ಞಯಾಗಾದಿಗಳನ್ನೂ ಅವುಗಳ ನಿಯಮಗಳ ಪ್ರಕಾರ ಮಾಡುತ್ತಿರುವರು. ಯಾರು ಯಾವ ಭಾವನೆಯಿಂದ ಯಾವ ವಿಧವಾದ ಶ್ರದ್ಧೆಯಿಂದ ಆರಾಧನೆ ಮಾಡುತ್ತಿದ್ದಾನೋ ಅವನಿಗೆ ಆ ಶ್ರದ್ಧೆಯನ್ನೇ ಇರುವಹಾಗೆ, ಅವನು ಆ ಕಾರ್ಯಗಳನ್ನು ಮಾಡುವಹಾಗೆ ದೇವರೇ ಮಾಡುತ್ತಿದ್ದಾನೆ. ಯಾರು ಯಾವ ಶ್ರದ್ಧೆಯಿಂದ ಯಜ್ಞಗಳನ್ನಾಗಲೀ, ಇತರ ಆರಾಧನೆಗಳನ್ನಾಗಲೀ ಮಾಡುತ್ತಿದ್ದಾನೋ, ಅವನಿಗೆ ಅವನ ಕೋರಿಕೆಗಳು ಈಡೇರುವ ಹಾಗೆ ದೇವರೇ ಏರ್ಪಾಟು ಮಾಡಿ ಇಟ್ಟಿದ್ದಾನೆ. ಶ್ರದ್ಧೆಯಿಂದ ಯಜ್ಞಗಳನ್ನು ಮಾಡುವವನಿಗೆ ಇರುವ ಕೋರಿಕೆ ಯಾವುದೊ ಅದನ್ನು ತನ್ನ ಪರಿಪಾಲನೆಯಲ್ಲಿನ ಸೂಕ್ಷ್ಮ ಶಕ್ತಿಯಿಂದ ಈಡೇರುವಹಾಗೆ ಮಾಡುತ್ತಿದ್ದಾನೆ. ಇದೆಲ್ಲವೂ ದೇವರ ಆಜ್ಞೆಯಲ್ಲಿನ ಭಾಗವಾಗಿಯೇ ನಡೆಯುತ್ತಿದೆ.

ಭೂಮಿ ಮೇಲೆ ಜ್ಞಾನವಾಗಲಿ, ಅಜ್ಞಾನವಾಗಲಿ ದೇವರಿಗೆ ತಿಳಿಯದೇ ಯಾವುದು ಇಲ್ಲ. **ಅಜ್ಞಾನಿಗಳ ಪ್ರಪಂಚ ಕೋರಿಕೆಗಳನ್ನು ಈಡೇರಿಸುವವನೂ**

**ಸಹಾ ದೇವರೇ. ಜ್ಞಾನಿಗಳಿಗೆ ಜನ್ಮರಾಹಿತ್ಯವನ್ನು ಮಾಡಿ ತನ್ನಲ್ಲಿ ಸೇರಿಸಿಕೊಳ್ಳುವವನೂ ಸಹ ದೇವರೇ.** ಅಜ್ಞಾನಿಗಳಾದವರು ಅಧರ್ಮಗಳಾದ ಯಜ್ಞಗಳನ್ನು ಆಚರಿಸುವಾಗ, ಯಜ್ಞಗ್ಗಳಿಂದ ದೇವರು ತಿಳಿಯುವುದಿಲ್ಲವೆಂದು, ಅವುಗಳಿಂದ ಪ್ರಪಂಚ ಕೋರಿಕೆಗಳು ಈಡೇರುತ್ತವೆಂದು ಇರುವಾಗ, ದೇವರು ತನ್ನ ದೂತರಾದ ಸೂಕ್ಷ್ಮ ಶಕ್ತಿಗಳಿಂದ ಯಜ್ಞಗಳನ್ನು ಮಾಡಿದವರ ಕೋರಿಕೆಗಳನ್ನು ಈಡೇರಿಸಿದರೆ, ದೇವರೂ ಸಹ ಅಧರ್ಮಗಳನ್ನೇ ಪ್ರೋತ್ಸಾಹಿಸಿದ ಹಾಗೇ ಅಲ್ಲವೇ ಎಂದು ಕೆಲವರು ಕೇಳಬಹುದು. ಈ ಪ್ರಶ್ನೆ ಬಹಳ ಮುಖ್ಯವಾದದ್ದೇ! ಈ ಪ್ರಶ್ನೆಗೆ ಎಲ್ಲರೂ ಉತ್ತರವನ್ನು ತಿಳಿದುಕೊಳ್ಳಲೇ ಬೇಕು. ಸೃಷ್ಟ್ಯಾದಿಯಿಂದ ದೇವರು ಯಾವ ಕೆಲಸವನ್ನು ಮಾಡದಿದ್ದರೂ, ಮೊದಲೇ ಯಾವುದು ಹೇಗೆ ನಡೆಯಬೇಕೋ ನಿರ್ಣಯಿಸಿ ಆದೇಶಿಸಿ ಇಟ್ಟಿದ್ದಾನೆ. ಈಗ ದೇವರು ಏನೂ ಮಾಡದಿದ್ದರೂ, ದೇವರೇ ಮಾಡುತ್ತಿದ್ದಾನೆಂದು ನಾವು ಅನ್ನುತ್ತಿದ್ದೇವೆ. ವಾಸ್ತವಕ್ಕೆ ದೇವರು ಏನೂ ಮಾಡಲಾರನು. ಸೃಷ್ಠಿಗೆ ಮೊದಲೇ ರಚಿಸಿದ ರಚನೆಯ ಪ್ರಕಾರ ಭೂಮಿಮೇಲೆ ಗ್ರಹಗಳು, ಭೂತಗಳು ಮನುಷ್ಯರಿಗೆ ಕಾಣಿಸದೆ ಮಾಡುತ್ತಿವೆ. ಇಂತಹ ಗ್ರಹಗಳು ಮಾಡುತ್ತಿದ್ದಾರೆಂದು ತಿಳಿಯದ ಮನುಷ್ಯರು, ಆ ಕೆಲಸವನ್ನು ದೇವರೇ ಮಾಡಿದ್ದಾನೆಂದು ಅಂದುಕೊಳ್ಳುತ್ತಿದ್ದಾರೆ. ಅದೇ ವಿಧವಾಗಿ ಯಜ್ಞಗಳ ಹಿಂದೆ ಯಾರಿಗೂ ಕಾಣಿಸದೆ ಸೂಕ್ಷ್ಮಶಕ್ತಿಗಳು ಕೆಲಸ ಮಾಡುತ್ತಿವೆಯೆಂದು, ಯಜ್ಞಗಳನ್ನು ಮಾಡುವ ಋತ್ವಿಕರಿಗೂ ಸಹ ತಿಳಿಯದು. ಯಜ್ಞಗಳನ್ನು ಮಾಡುವ ಋತ್ವಿಕರು ತಾವು ಯಜ್ಞಕುಂಡದಲ್ಲಿ ಅಗ್ನಿಗೆ ಆಹುತಿ ಕೊಡುವ ವಸ್ತುಗಳು, ವಸ್ತ್ರಗಳು, ಔಷಧಿಗಳು ಮೊದಲಾದವುಗಳನ್ನೆಲ್ಲಾ ದೇವತೆಗಳು ಸ್ವೀಕರಿಸುತ್ತಾರೆಂದು, ಅವುಗಳಿಂದ ತೃಪ್ತಿ ಹೊಂದಿದ ದೇವತೆಗಳು ಪ್ರತಿಫಲವಾಗಿ ತಮ್ಮ ಕೋರಿಕೆಗಳನ್ನು ಈಡೇರಿಸುತ್ತಾರೆಂದು ಅಂದುಕೊಳ್ಳುವುದು ನಡೆಯುತ್ತಿದೆ.

ತ್ರೇತಾಯುಗದಲ್ಲಿ ದಶರಥನು ಪುತ್ರಕಾಮೇಷ್ಠಿ ಯಾಗ ಮಾಡಿದಾಗ, ಆ ಯಾಗಕ್ಕೆ ಕಾಣಿಸದೆ ಅಧಿಪತಿಯಾಗಿರುವವನು ಯಾರೋ, ಅಂದಿಗೂ ಇಂದಿಗೂ ಯಾರಿಗೂ ತಿಳಿಯದು. ಆ ದಿನ ಯಾವ ಭೂತ ಆ ಯಜ್ಞಕ್ಕೆ

ಅಧಿಪತಿಯಾಗಿದೆಯೋ, ಆ ಭೂತವೇ ಅವರಿಗೆ ಸಂತತಿಯನ್ನು ಕೊಟ್ಟಿದೆ. ಪುತ್ರರನ್ನು ಆಶಿಸಿ ಮಾಡಿರುವ ಯಜ್ಞದಲ್ಲೇ ಅಲ್ಲದೇ, ಯಾವುದನ್ನು ಆಶಿಸಿ ಮಾಡಿದ ಯಜ್ಞದಲ್ಲಾದರೂ, ಇದೇ ವಿಧಾನ ನಡೆಯುತ್ತಿದೆಯೆಂದು ತಿಳಿಯುತ್ತಿದೆ. ಮತ್ತೊಂದು ತಿಳಿಯದ ವಿಷಯವೇನೆಂದರೆ! ಮಾಡಬೇಕಾಗಿರುವ ಯಜ್ಞವನ್ನು ಋತ್ವಿಕರು ಅಶ್ರದ್ಧೆಯಿಂದ ಮಾಡಿದರೂ, ಮಾಡಿಸುವವನು ಶ್ರದ್ಧಾಹೀನನಾಗಿ ಮಾಡಿದರೂ, ಆ ಯಜ್ಞಕ್ಕೆ ಅಧಿಪತಿಯಾದ ಗ್ರಹಶಕ್ತಿಗೆ ಕೋಪಬರುತ್ತದೆ. ಆದ್ದರಿಂದ ಅಶ್ರದ್ಧೆಯಿಂದ ಮಾಡಿದ ಋತ್ವಿಕರಿಗೂ, ಮಾಡಿಸಿದ ಯಜಮಾನನಿಗೂ ತೀರದ ನಷ್ಟ ಕಷ್ಟ ಬರುತ್ತದೆ. ಯಜ್ಞವನ್ನು ಯಾವ ಕೋರಿಕೆಯಿಂದ ಮಾಡಿರುತ್ತಾರೊ ಆ ಕೋರಿಕೆ ಈಡೇರುವುದಿಲ್ಲ. ಆದ್ದರಿಂದ ಯಜ್ಞಗಳನ್ನು ಮಾಡುವವನು, ಮಾಡಿಸುವವರು ಶ್ರದ್ಧೆಯಿಂದ ಮಾಡಬೇಕಾಗಿರುತ್ತದೆ. ಈಗ ಕೆಲವರು ಒಂದು ಪ್ರಶ್ನೆ ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! "ದೇವರು ಸ್ವತಃವಾಗಿ ಮಾಡದಿದ್ದರೂ, ಗ್ರಹಗಳಾಗಲಿ, ಭೂತಗಳಾಗಲಿ ಯಜ್ಞಗಳಿಗೆ ಅಧಿಪತಿಗಳಾಗಿ ಇದ್ದು, ಯಜ್ಞಗಳನ್ನು ಮಾಡಿದವರ ಕೋರಿಕೆಗಳನ್ನು ಈಡೇರಿಸುವುದರಿಂದ ಯಜ್ಞಗಳನ್ನು ಆಚರಿಸಿದರೆ ಫಲವಿದೆಯೆಂದು, ಮನುಷ್ಯರೆಲ್ಲರೂ ಯಜ್ಞಗಳ ಕಡೆ ಕೋರಿಕೆಗಳ ನಿಮಿತ್ತ ಹೋಗುತ್ತಾರಲ್ಲ! ಆಗ ಕಾಮ್ಯಾಸಕ್ತರು ಹೊರತು ಮೋಕ್ಷಾಸಕ್ತರು ಯಾರೂ ಇಲ್ಲದೇ ಹೋಗುತ್ತಾರೆ ಅಲ್ಲವೆ! ಇದೆಲ್ಲವನ್ನೂ ನೋಡಿದರೆ ಅಧರ್ಮಗಳನ್ನು ಖಂಡಿಸಿ ಧರ್ಮಗಳನ್ನು ನೆಲೆಗೊಳಿಸುತ್ತೇನೆಂದು ಹೇಳಿದ ದೇವರು ಧರ್ಮಗಳ ಕಡೆ ಇದ್ದಹಾಗೇನಾ? ಅಥವಾ ಅಧರ್ಮಗಳ ಕಡೆ ಇದ್ದಹಾಗಾ? ಎಂದು ಸಂಶಯ ಬರುತ್ತಿದೆ. ಭಗವದ್ಗೀತೆಯಲ್ಲಿ ಯಜ್ಞಗಳನ್ನು ಅಧರ್ಮಗಳೆಂದು ಪ್ರಕಟಿಸಿದ ಭಗವಂತನು ಬ್ರಾಹ್ಮಣರು ಮಾಡುವ ಯಜ್ಞಗಳನ್ನು ಏಕೆ ಖಂಡಿಸಲಿಲ್ಲ?" ಎಂದು ಕೇಳಬಹುದು. ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ಧರ್ಮಗಳೂ ಇವೆ, ಅಧರ್ಮಗಳೂ ಇವೆ. ಧರ್ಮಗಳೆಂದುಕೊಂಡು ಧರ್ಮಗಳಲ್ಲದ ಆಚರಣೆಯನ್ನು ಆಚರಿಸುವುದು ಅಧರ್ಮವಾಗುತ್ತದೆ.

**ಧರ್ಮಗಳಿಂದ ದೇವರು ತಿಳಿದು ಮೋಕ್ಷ ಲಭಿಸುತ್ತಿದೆ. ಅಧರ್ಮಗಳಿಂದ ಮೋಕ್ಷ ಲಭಿಸುತ್ತಿಲ್ಲ, ದೇವರು ತಿಳಿಯುತ್ತಿಲ್ಲ. ಚೆನ್ನಾಗಿ ಪರಿಶೀಲಿಸಿದರೆ ಧರ್ಮವಲ್ಲದ್ದು ಅಧರ್ಮವಾಗುತ್ತದೆ. ಧರ್ಮಗಳ ಸ್ಥಾನದಲ್ಲಿ ಧರ್ಮವಲ್ಲದ್ದು ಇರುವಾಗ ಅದನ್ನು ಅಧರ್ಮವೆನ್ನುತ್ತಿದ್ದೇವೆ.** ಅಷ್ಟೇ ಆಗಲಿ ಅಧರ್ಮ ಧರ್ಮಕ್ಕೆ ಶತ್ರುವಲ್ಲ. ಹಾಗೇ ಧರ್ಮವೂ ಸಹ ಅಧರ್ಮಕ್ಕೆ ಶತ್ರುವಲ್ಲ. ಧರ್ಮದಿಂದ ಬರುವ ಫಲಿತ ಒಂದಾದರೆ, ಅಧರ್ಮದಿಂದ ಬರುವ ಫಲಿತ ಸ್ವಲ್ಪ ವ್ಯತ್ಯಾಸದಿಂದ ಮತ್ತೊಂದಾಗಿ ಇದೆ. ಧರ್ಮವಾಗಲಿ ಅಧರ್ಮವಾಗಲಿ ಎರಡೂ ಧರ್ಮ ಜಾತಿವೇ ಆಗಲಿ ಬೇರೆ ಜಾತಿವಲ್ಲ. ಧರ್ಮ ಆಚರಣೆಯಿಂದ ಕರ್ಮ ರಹಿತ ನಡೆದು ಮುಕ್ತಿ ಲಭಿಸುತ್ತಿದೆ. ಅಧರ್ಮ ಅಚರಣೆಯಿಂದ ಪುಣ್ಯಕರ್ಮ ಬಂದು ಸುಖಗಳು ಬರುತ್ತವೆ. **ಧರ್ಮದಿಂದ ಮೋಕ್ಷ ಬರುತ್ತಿರುವಾಗ, ಅಧರ್ಮದಿಂದ ಮೋಕ್ಷವಲ್ಲದ ಸ್ವರ್ಗ ಲಭಿಸುತ್ತಿದೆ. ಧರ್ಮಕ್ಕೂ, ಅಧರ್ಮಕ್ಕೂ ಪೂರ್ತಿ ವಿರುದ್ಧವಾದ ಕೆಟ್ಟ ಗುಣಗಳನ್ನು ಹೊಂದಿದವರನ್ನು ಧರ್ಮ ಶತ್ರುಗಳು ಅನ್ನುತ್ತೇವೆ.** ಪೂರ್ತಿ ಅಜ್ಞಾನಿಗಳಾದವರು ಇತ್ತ ಧರ್ಮಗಳನ್ನಾಗಲೀ, ಅತ್ತ ಅಧರ್ಮಗಳನ್ನಾಗಲಿ ಇಷ್ಟ ಪಡುವುದಿಲ್ಲ. ಧರ್ಮಗಳನ್ನು, ಅಧರ್ಮಗಳನ್ನು ಎರಡನ್ನೂ ದ್ವೇಷಿ ಸುವವರಾಗಿ ಇರುತ್ತಾರೆ. ಅಂತಹವರು ಪಾಪವನ್ನು ಸಂಪಾದಿಸಿಕೊಂಡಿರುವ ವರಾಗಿ ನರಕವನ್ನು ಹೊಂದುತ್ತಿರುವರು. ಈಗ ಮನುಷ್ಯರನ್ನು ಮೂರು ವಿಧಗಳಾಗಿ ವಿಭಜಿಸಬಹುದು. ಒಂದು ಧರ್ಮವರರು, ಎರಡು ಅಧರ್ಮವರರು, ಮೂರು ಧರ್ಮಾ ಧರ್ಮಗಳಿಗೆ ವಿರುದ್ಧವಾದವರು. ಈ ಮೂರು ವಿಧಗಳವರಲ್ಲಿ **ಧರ್ಮವರರಿಗೆ ಮೋಕ್ಷ ಲಭಿಸುತ್ತದೆ. ಅಧರ್ಮವರರಿಗೆ ಸ್ವರ್ಗ ಲಭಿಸುತ್ತದೆ. ಧರ್ಮ ಶತ್ರುಗಳಾದವರಿಗೆ ನರಕ ಲಭಿಸುತ್ತದೆ.** ಮೋಕ್ಷ, ಸ್ವರ್ಗ, ನರಕ ಅನ್ನುವ ಮೂರು ಅನುಭವಗಳನ್ನು ಮನುಷ್ಯನಿಗೆ ದೇವರು ತಯಾರಿಸಿ ಇಟ್ಟಿದ್ದಾನೆ. ಮೋಕ್ಷ, ಸ್ವರ್ಗ, ನರಕ ಅನ್ನುವ ಮೂರು ಅನುಭವ ಗಳನ್ನೂ ಸಹ ತನ್ನ ಜ್ಞಾನದಲ್ಲಿ ದೇವರು ವಿವರಿಸಿ ಹೇಳಿದ್ದಾನೆ. ಮನುಷ್ಯ ತನ್ನ ಶ್ರದ್ಧೆಯನ್ನು ಧರ್ಮಗಳ ಮೇಲೆ ಕೇಂದ್ರೀಕರಿಸಿ ಮೋಕ್ಷವನ್ನು ಹೊಂದಬಹುದು. ಹಾಗೇ ಅಧರ್ಮಗಳ ಮೇಲೆ ತನ್ನ ಶ್ರದ್ಧೆಯನ್ನಿಟ್ಟು ಸ್ವರ್ಗವನ್ನು ಹೊಂದಬಹುದು. ಪೂರ್ತಿ

ಅಜ್ಞಾನವಿರುವ ಪ್ರಪಂಚ ವಿಷಯಗಳ ಮೇಲೆ ಶ್ರದ್ಧೆಯನ್ನು ಹೊಂದಿ ನರಕವನ್ನೂ ಸಹ ಹೊಂದಬಹುದು. ಈ ಮೂರರ ವಿಷಯದಲ್ಲೂ ದೇವರು ಯಾರ ಶ್ರದ್ಧೆಗೆ ಅವನನ್ನು ಬಿಟ್ಟಿದ್ದಾನೆ.

ಭಾರತದೇಶಕ್ಕೆ ರಾಷ್ಟ್ರಪತಿ ಆಗುವುದಕ್ಕೆ ಕೆಲವು ಅರ್ಹತೆಗಳು ಇರಬೇಕು ಅನ್ನುತ್ತಾರೆ. ರಾಷ್ಟ್ರಪತಿ ಪದವಿಗೆ ಹೋಗಬೇಕೆಂದರೆ ಆತನು ಭಾರತದೇಶದ ಪೌರನಾಗಿರಬೇಕು. ನಂತರ ಅರವತ್ತು (60) ವರ್ಷಗಳ ವಯಸ್ಸು ದಾಟಿರಬೇಕು ಅನ್ನುವ ನಿಯಮಗಳು ಇವೆ. ಹಾಗೇ ಒಬ್ಬ ಮನುಷ್ಯ ದೇವರು ಆಗುವುದಕ್ಕೂ ಸಹ ಕೆಲವು ಅರ್ಹತೆಗಳು ಇರಬೇಕು. ದೇವರ ಪದವಿ ಸಿಗಬೇಕೆಂದರೆ ಆತನು ಯೋಗಿಯಾಗಿರಬೇಕು. ಕರ್ಮ ಪೂರ್ತಿ ಇಲ್ಲದೇ ಮುಗಿದುಹೋಗಿರಬೇಕು. ಹಗಲು ಹೊತ್ತು, ಶುಕ್ಲ ಪಕ್ಷದಲ್ಲಿ, ಉತ್ತರಾಯಣದಲ್ಲಿ, ಸೂರ್ಯರಶ್ಮಿ ಇರುವ ಪ್ರದೇಶದಲ್ಲಿ ಮರಣಿಸಬೇಕು. ಅಂಥವನು ದೇವರಾಗಿ ಬದಲಾಗಬಹುದು. ಭಾರತದೇಶದ ಪೌರತ್ವವು ಇಲ್ಲದಿದ್ದರೂ, ಅರವತ್ತು (60) ವರ್ಷಗಳ ವಯಸ್ಸು ದಾಟದಿದ್ದರೂ ಎಷ್ಟು ಒಳ್ಳೆಯವನಾದರೂ, ಹೇಗೆ ರಾಷ್ಟ್ರಪತಿ ಪದವಿಗೆ ಅರ್ಹನಲ್ಲವೋ, ಹಾಗೇ ಯೋಗಿ ಆಗದಿದ್ದರೂ, ಕರ್ಮ ಮುಗಿಯದಿದ್ದರೂ, ಮರಣಿಸಬೇಕಾದ ಸಮಯದಲ್ಲಿ ಮರಣಿಸದೇ ಹೋದರೂ ಆತನು ದೇವರು ಆಗುವುದಕ್ಕೆ, ಮೋಕ್ಷ ಹೊಂದುವುದಕ್ಕೆ, ತಿರುಗಿ ಹುಟ್ಟದೇ ಇರುವುದಕ್ಕೆ, ಎಲ್ಲಾ ವ್ಯಾಪಿಸಿ ಸರ್ವಾಂತರ್ಯಾಮಿ ಅನಿಸಿಕೊಳ್ಳುವುದಕ್ಕೆ ಅರ್ಹನಲ್ಲ. ಧರ್ಮಗಳನ್ನು ಆಚರಿಸಿ ದೈವವನ್ನು ಸೇರುವುದಕ್ಕೆ ಮೋಕ್ಷದ ಮೇಲೆ ಪೂರ್ತಿ ಆಸಕ್ತಿ ಹೊಂದಿದವರಿದ್ದರೇ, ಅಂತಹವನು ದೇವರಿಗೆ ಇಷ್ಟನಾಗುತ್ತಾನೆ. ದೈವವೊಂದರ ಬೆಲೆ ತಿಳಿಯದವನು, ಮೋಕ್ಷದ ಮೇಲೆ ಶ್ರದ್ಧೆ ಇಲ್ಲದವನು, ದೇವರ ಧರ್ಮಗಳನ್ನು ತಿಳಿಯದವನು, ದೇವರು ಒಬ್ಬನೇ ಎಂದು ಹೇಳುತ್ತಾ ಇತರರನ್ನೂ ಸಹ ದೇವರಾಗಿ ಲೆಕ್ಕಿಸಿಕೊಳ್ಳುವವನ ಮೇಲೆ ದೇವರಿಗೆ ಇಷ್ಟವಿರುವುದಿಲ್ಲ. ಅಂತಹವನು ತನ್ನ ಹತ್ತಿರಕ್ಕೆ ಬರುವುದು ದೇವರಿಗೆ ಇಷ್ಟವಿರುವುದಿಲ್ಲ. ಅಂತಹವನು ಅವನ ದಾರಿಯಲ್ಲಿ ಅವನು ಹೋಗುವಹಾಗೆ ದೇವರು ಮಾಡುತ್ತಿದ್ದಾನೆ. ದೇವರಿಗೆ

ಇಷ್ಟವಿಲ್ಲದವನನ್ನು ತನ್ನಕಡೆಗೆ ಬಾರದಂತೆ ಮಾಡುವುದಕ್ಕೆ ಮಾಯೆ ಅನ್ನುವುದನ್ನು ದೇವರು ಸೃಷ್ಟಿಸಿ ಇಟ್ಟಿದ್ದಾನೆ. ದೇವರು ಯಾರನ್ನು ಒಪ್ಪಿಕೊಳ್ಳುವನೋ ಅವನನ್ನು, ಮಾಯೆ ತನ್ನ ಬಂಧನದಿಂದ ಬಿಡಿಸಿ ದೇವರ ಹತ್ತಿರಕ್ಕೆ ಹೋಗುವಹಾಗೆ ಮಾಡುತ್ತಿದೆ. ಈ ವಿಷಯವನ್ನು ತಿಳಿದ ಒಬ್ಬ ಜ್ಞಾನಿ ತನ್ನ ಪದ್ಯದಲ್ಲಿ ಹೀಗೆ ಹೇಳುತ್ತಿದ್ದಾನೆ.

***ಪತಿಯೊಪ್ಪಿದರೆ ಸತಿ ಒಪ್ಪುವಳು***
***ಪತಿಸತಿಗಳೊಂದಾದರೆ ಪರಮ ಪಾವನದಲ್ಲಿ***
***ಪತಿಸತಿ ನ್ಯಾಯವೆ ಮೋಕ್ಷ***
***ಬತುಲಿತ ಪರಮಾತ್ಮನಲ್ಲಿ ಐಕ್ಯವಾಗು ವೇಮಾ***

ಪತಿ ಎಂದರೆ ಪರಮಾತ್ಮ, ಸತಿ ಎಂದರೆ ಮಾಯೆ ಎಂದು ಅರ್ಥ. ಪತಿಯೊಪ್ಪಿದರೆ ಎಂದರೆ ದೇವರಿಗೆ ಇಷ್ಟವಾದರೆ, ಮಾಯೆಯೂ ಸಹ ಸಮ್ಮತಿಸುತ್ತದೆಂದು, ಆಗ ಮಾಯೆ ತನ್ನ ಬಂಧನದಿಂದ ಮನುಷ್ಯನನ್ನು ಬಿಡುವುದೆಂದು, ಹಾಗೆ ಮಾಯೆಯಿಂದ ಬಿಡುಗಡೆಯಾಗಿರುವವನೇ ದೇವರನ್ನು ಸೇರಿ ಮೋಕ್ಷ ಹೊಂದುವನೆಂದು ಪದ್ಯದಲ್ಲಿ ಭಾವವಿದೆ. ಮಾಯೆ ಬಿಡದವರೆಗೂ ಅದನ್ನು ದಾಟಿ ಮೋಕ್ಷದವರೆಗು ಯಾರೂ ಬರಲಾರನೆಂದು ಭಗವದ್ಗೀತೆ ವಿಜ್ಞಾನಯೋಗದಲ್ಲಿ 14ನೇ ಶ್ಲೋಕದಲ್ಲಿಯೂ ಸಹ ಹೇಳಿದ್ದಾರೆ.

***ಶ್ಲೋ॥ ದೈವೀಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ।***
***ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿ ತೇ॥***

**ಭಾವಾರ್ಥ :** ನಾನು ತಯಾರು ಮಾಡಿಟ್ಟಿರುವ ಮಾಯೆ ಗುಣಗಳಿಂದ ಕೂಡಿಕೊಂಡಿರುವುದಾಗಿ ಬಲವಾಗಿ ಇದೆ. ಅದನ್ನು ದಾಟುವುದು ದುಸ್ಸಾಧ್ಯವಾದ ಕೆಲಸ. ಯಾರೂ ಅದನ್ನು ದಾಟಲಾರರು. ಆದರೇ ನನ್ನನ್ನು ಆರಾಧಿಸುವವರು ಮಾತ್ರ ಮಾಯೆಯನ್ನು ದಾಟಿ ಬರಬಲ್ಲರು. ನನ್ನನ್ನು ಆರಾಧಿಸುವವನನ್ನು ಮಾತ್ರ ನನ್ನ ಮಾಯೆ ಆತಂಕಪಡಿಸದೇ ಬಿಟ್ಟು ಹಾಕುತ್ತದೆ. ಇದನ್ನು ಅನುಸರಿಸಿ

ನೋಡಿದರೆ ಮಾಯೆ ಮನುಷ್ಯನನ್ನು ದೇವರಕಡೆಗೆ ಹೋಗದಂತೆ ಮಾಡುವುದಕ್ಕೆ, ಯಜ್ಞ ಅನ್ನುವ ಬಲೆಯನ್ನು ಹೊಂದಿದೆಯೆಂದು ತಿಳಿಯುತ್ತಿದೆ. ದೇವರ ಧರ್ಮಗಳನ್ನು ತಿಳಿಯದವನು, ದೇವರನ್ನು ಆರಾಧಿಸದವನು, ದೇವರ ಕಡೆ ಹೋಗದಂತೆ ಮಾಯೆ ಯಜ್ಞಗಳಲ್ಲಿ ಲಗ್ನ ಮಾಡುತ್ತಿದೆ. ದೇವರನ್ನು ಆರಾಧಿಸುವುದಕ್ಕೆ ಯಜ್ಞಗಳು ಮುಖ್ಯವೆಂದು ಮಾಯೆ ಬೋಧಿಸುವುದರಿಂದ, ದೈವಾರಾಧನೆಯಲ್ಲಿ ಯಜ್ಞಗಳು ಮುಖ್ಯವಾದವೆಂದು ಮನುಷ್ಯ ಹೇಳುತ್ತಿದ್ದಾನೆ. ಮನುಷ್ಯನಿಗೆ ದೇವರು ತನ್ನ ಮಾಯೆಯಿಂದ ಯಜ್ಞಗಳಲ್ಲಿ ಇಷ್ಟವನ್ನು ಕಲ್ಪಿಸಿ ನಿತ್ಯವೂ ಅವುಗಳನ್ನು ಮಾಡುವಹಾಗೆ ಮಾಡುತ್ತದೆ. ಆದ್ದರಿಂದ ಯಜ್ಞಗಳನ್ನು ಅಧರ್ಮಗಳೆಂದು ಹೇಳಿದ ದೇವರು, ಅವುಗಳನ್ನು ಪೂರ್ತಿ ಖಂಡಿಸಿ ಮನುಷ್ಯರು ಮಾಡಬಾರದೆಂದು ಹೇಳಲಿಲ್ಲ. ಮೇಲಾಗಿ ತನಗೆ ಇಷ್ಟವಿಲ್ಲದವನು, ತನ್ನಕಡೆ ಬಾರದಂತಿರುವುದಕ್ಕೆ, ಯಜ್ಞಗಳನ್ನು ಮಾಯೆಯಿಂದ ಧರ್ಮಗಳೆಂದು ನಂಬಿಸುತ್ತಿದೆ. ಯಜ್ಞಗಳು ಅಧರ್ಮಗಳೆಂದು ಹೇಳಿದ ದೇವರು ಅವುಗಳನ್ನು ಮಾಡಬಾರದೆಂದು ಹೇಳಲಿಲ್ಲ. ಯಾರಿಗೆ ಎಂತಹ ಶ್ರದ್ಧೆ ಇದ್ದರೇ, ಅಂತಹ ಆರಾಧನೆಯನ್ನೇ ಬಿಡದೇ ಮಾಡುವ ಹಾಗೆ ಮಾಡಿ, ಅವುಗಳಿಂದ ತಮ್ಮ ಕೋರಿಕೆಗಳನ್ನೂ ಸಹ ಈಡೇರುವಹಾಗೆ ಮಾಡುತ್ತಿದ್ದಾನೆ. ಯಜ್ಞಗಳಿಂದ ತಾನು ತಿಳಿಯುವುದಿಲ್ಲವೆಂದು, ಯಜ್ಞಗಳು ಅಧರ್ಮಗಳೆಂದು ಅವುಗಳಿಂದ ಪುಣ್ಯ ಬರುತ್ತದೆಂದು ಹೇಳಿದ್ದಾನೆ. ಅಧರ್ಮಗಳಾದ ಯಜ್ಞಗಳು ಪಾಪಕಾರ್ಯಗಳೆಂದೂ ಸಹ ದೇವರು ಎಲ್ಲೂ ಹೇಳಲಿಲ್ಲ. ಯಜ್ಞಗಳು ಧರ್ಮಗಳು ಆಗದಷ್ಟು ಮಾತ್ರಕ್ಕೆ ಧರ್ಮವಿರುದ್ಧಗಳೆಂದು ಹೇಳುವುದಕ್ಕೆ ಆಗುವುದಿಲ್ಲ. ಧರ್ಮವಲ್ಲದ್ದು ಅಧರ್ಮ ವಾಗುತ್ತದೆ ಆದರೆ ಧರ್ಮವಿರುದ್ಧವಲ್ಲ. ಈಗ ಅವಶ್ಯಕತೆಯನ್ನು ಅನುಸರಿಸಿ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಧರ್ಮಕ್ಕೆ ವಿರುದ್ಧವಾದದ್ದು ಅಧರ್ಮವೆಂದು ನಾವು ಇಲ್ಲಿಯವರೆಗು ಅಂದುಕೊಂಡಿದ್ದೆವು. ಈಗ ಧರ್ಮವಲ್ಲದ್ದು ಅಧರ್ಮವೆಂದು, ಅಧರ್ಮ ಧರ್ಮಕ್ಕೆ ವಿರುದ್ಧವಲ್ಲವೆಂದು ನೀವು ಹೇಳುತ್ತಿದ್ದೀರ. ಹಾಗಾದರೇ ಧರ್ಮಕ್ಕೆ ಪೂರ್ತಿ ವಿರುದ್ಧವಾದದ್ದು ಯಾವುದು ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ.

ಧರ್ಮವು ಜೀವಿಗೆ ಮುಕ್ತಿಯನ್ನು ಕೊಡುತ್ತದೆ. ಇದನ್ನು ಆಧಾರ ಮಾಡಿಕೊಂಡು ಮುಕ್ತಿಯನ್ನು ಕೊಡದೇ ಜನ್ಮ ಕೊಡುವುದು ಯಾವುದಾದರೇ ಇದೆಯೋ, ಅದನ್ನು ಧರ್ಮಕ್ಕೆ ವಿರುದ್ಧವಾದದ್ದೆಂದು ಹೇಳಬಹುದು. ಯಜ್ಞಗಳು ಪುಣ್ಯವನ್ನು ಮನುಷ್ಯನಿಗೆ ಅಂಟಿಸುವುದರಿಂದ, ಪುಣ್ಯವನ್ನು ಅನುಭವಿಸುವುದಕ್ಕೆ ಮನುಷ್ಯ ಮುಕ್ತಿಗೆ ವಿರುದ್ಧವಾಗಿ ಜನ್ಮಕ್ಕೆ ಹೋಗಬೇಕಾಗಿರುತ್ತದೆ. ಆದ್ದರಿಂದ ಯಜ್ಞಗಳಾದ ಅಧರ್ಮಗಳು ಧರ್ಮಗಳಿಗೆ ವಿರುದ್ಧ ವಲ್ಲವೆ! ಎಂದು ಕೆಲವರು ಕೇಳಬಹುದು. ಆ ವಿಧವಾಗಿ ಆದರೇ ಅಧರ್ಮಗಳು ಧರ್ಮಗಳಿಗೆ ವಿರುದ್ಧ ವಾದವೆಂದು ನಾವೂ ಒಪ್ಪಿಕೊಳ್ಳುವುದು ತಪ್ಪುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಎದುರಿಗಿರುವವರಿಗೆ ಅರ್ಥವಾಗುವುದಕ್ಕೆ ಧರ್ಮಗಳಿಗೆ ವಿರುದ್ಧಗಳು ಅಧರ್ಮಗಳೆಂದು ಹೇಳಿದರೂ ಫರವಾಗಿಲ್ಲ. ಆದರೇ ಆ ಮಾತು ಶಾಸ್ತ್ರಬದ್ಧ ಅಲ್ಲ. ಆದ್ದರಿಂದ ಧರ್ಮಕ್ಕೆ ವಿರುದ್ಧವಾದವು ಅಧರ್ಮಗಳೆಂದು ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಹೇಳಬಾರದು. "ಪದ್ಧತಿ ಪ್ರಕಾರ ಸತ್ಯವೇ ಎಂದು, ಈ ವಿಧವಾಗಿ ಒಪ್ಪಿಕೊಳ್ಳುವುದು ತಪ್ಪುವುದಿಲ್ಲವೆಂದು ನೀವು ಹೇಳುತ್ತಲೇ, ಮತ್ತೊಂದು ಕಡೆ ಅದು ಅಸತ್ಯ, ಶಾಸ್ತ್ರಬದ್ಧವಲ್ಲವೆಂದು ಅನ್ನುವುದು ಎರಡು ನಾಲಿಗೆಗಳ ಮಾತಾಗಿ ಕಾಣಸುತ್ತಿದೆ" ಎಂದು ಯಾರಾದರೂ ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಹೇಳಬೇಕಾದ ಜವಾಬ್ದಾರಿ ನನ್ನದೇ, ಆದ್ದರಿಂದ ನಿಮಗೆ ಅರ್ಥವಾಗುವುದಕ್ಕೆ ಒಂದು ಉದಾಹರಣೆಯನ್ನು ಹೇಳುತ್ತೇನೆ ನೋಡಿ.

ಪೂರ್ವದಲ್ಲಿ ದೊಡ್ಡ ಯೋಗಿಗಳಾದವರು ಆಗಿನ ಪರಿಪಾಲಕರಾದ ರಾಜರ ಮನೆಗಳಿಗೆ ಹೋಗುತ್ತಿದ್ದರು. ಇಂತಹಾ ಮಹರ್ಷಿ, ಅಥವಾ ಇಂತಹಾ ಯೋಗಿ ತಮ್ಮ ಮನೆಗೆ ಬರುತ್ತಿದ್ದಾನೆಂದು ತಿಳಿದ ರಾಜ ಯೋಗಿಯನ್ನು ಆಹ್ವಾನಿಸಿ, ಎತ್ತರದಲ್ಲಿರುವ ಪೀಠದ ಮೇಲೆ ಕೂರಿಸಿ, ಆ ಯೋಗಿ ಪಾದಗಳನ್ನು ಒಂದು ತಟ್ಟೆಯಲ್ಲಿ ಇಟ್ಟು ನೀರಿನಿಂದ ತೊಳೆಯುತ್ತಿದ್ದರು. ತೊಳೆದ ನೀರನ್ನು ಅಲ್ಲಿರುವವರೆಲ್ಲರೂ ತಮ್ಮ ತಲೆಗಳ ಮೇಲೆ ಹಾಕಿಕೊಳ್ಳುತ್ತಿದ್ದರು. ಹಾಗೆ ಮಾಡುವುದರಿಂದ ಯೋಗಿ ಪಾದಗಳಿಗಿರುವ ಪಾದಧೂಳಿ ನೀರಿನೊಳಗೆ

ಬರುತ್ತದೆಂದು, ಯೋಗಿ ಯೊಂದರ ಪಾದಧೂಳಿಗೆ ಇರುವ ಶಕ್ತಿ ಆ ನೀರಿನಲ್ಲಿ ಸಮಾನವಾಗಿ ವ್ಯಾಪಿಸಿ ಇರುತ್ತದೆಂದು, ಹಾಗೆ ಯೋಗ ಶಕ್ತಿವಂತವಾದ ನೀರನ್ನು ತಮ್ಮ ತಲೆಗಳ ಮೇಲೆ ಹಾಕಿಕೊಳ್ಳುವುದರಿಂದ ತಮ್ಮ ತಲೆಯಲ್ಲಿರುವ ಕರ್ಮಗಳು ನಶಿಸುತ್ತವೆಂದು ಅವರ ಭಾವ. ಇದೆಲ್ಲವೂ ಆ ದಿನಗಳಲ್ಲಿ ತಿಳಿದು ಇಷ್ಟದಿಂದ ಯೋಗಿ ಪಾದಗಳನ್ನು ತೊಳೆದ ನೀರನ್ನು ತಲೆ ಮೇಲೆ ಹಾಕಿಕೊಳ್ಳುತ್ತಿದ್ದರು. ಈ ವಿಧಾನ ಒಳ್ಳೆಯದು, ಎಲ್ಲರೂ ಒಪ್ಪಿಕೊಳ್ಳುವಂತದ್ದು. ಒಂದು ದಿನ ಒಬ್ಬ ರಾಜನ ಮನೆಗೆ ಒಬ್ಬ ಮಹರ್ಷಿ ಬರುವುದು, ರಾಜನ ಮನೆಯಲ್ಲಿರುವವರು ಮತ್ತು ರಾಜ ಎಲ್ಲರೂ ಸೇರಿ, ಬಂದಿರುವ ಮಹರ್ಷಿ ಪಾದಗಳನ್ನು ತೊಳೆದು ಆ ನೀರನ್ನು ಎಲ್ಲರೂ ತಲೆಮೇಲೆ ಹಾಕಿಕೊಳ್ಳುವುದು ನಡೆದಿದೆ. ಮರುದಿನ ಮತ್ತೊಂದು ರಾಜ್ಯಕ್ಕೆ ಅಧಿಪತಿಯಾಗಿರುವ ರಾಜ, ಮಹರ್ಷಿ ಬಂದು ಹೋಗಿರುವ ಮನೆಗೆ ಬರುವುದು ನಡೆದಿದೆ. ನಿನ್ನೆ ಮಹರ್ಷಿ ಬಂದು ಹೋಗಿದ್ದಾನೆ. ಈ ದಿನ ಪಕ್ಕ ರಾಜ್ಯದ ರಾಜ ಬಂದಿದ್ದಾನೆ. ಪಕ್ಕರಾಜ್ಯದ ರಾಜನೊಂದರ ಬರುವಿಕೆಯನ್ನು ಮೊದಲೇ ತಿಳಿದುಕೊಂಡ ರಾಜ, ತನ್ನ ಪರಿವಾರದಲ್ಲಿರುವ ಕೆಲವರಿಗೆ ಬರುವ ರಾಜನನ್ನು ಆಹ್ವಾನಿಸಿ, ಮನೆಯೊಳಗೆ ಗೌರವವಾಗಿ ಕರೆದುಕೊಂಡು ಬನ್ನಿರೆಂದು ಹೇಳಿದ್ದಾನೆ. ಆಗ ಊರಿನ ಹೊರಗೆ ಕೆಲವರು ಬಂದು ರಾಜನಿಗೋಸ್ಕರ ಕಾದುಕೊಂಡು ಇದ್ದರು. ಕೆಲವರು ರಾಜನ ಮನೆ ಮುಂದೆಯೇ ಚೆಂಬಿನಲ್ಲಿ ನೀರನ್ನು ತುಂಬಿಕೊಂಡು ರಾಜ ಬಂದಕೂಡಲೇ ಕಾಲು ತೊಳೆಯುವುದಕ್ಕೆ ಸಿದ್ಧವಾಗಿದ್ದರು. ಅಷ್ಟರಲ್ಲಿ ಬರಬೇಕಾಗಿದ್ದ ರಾಜ ಬಂದನು. ರಾಜ ಮನೆಹತ್ತಿರಕ್ಕೆ ಬಂದ ಕೂಡಲೇ ಮನೆಯ ಹೊರಗೇ ರಾಜನ ಪಾದಗಳನ್ನು ತೊಳೆದು ಬಟ್ಟೆಯಿಂದ ಹೊರಿಸಿದ್ದಾರಂತೆ. ಅವರು ಮಾಡಿದ ಗೌರವಕ್ಕೆ ಬಂದಿರುವ ರಾಜ ಸಂತೋಷಪಟ್ಟನು. ಇದೆಲ್ಲವೂ ನೋಡಿದ ನಂತರ ನಮಗೆ ಒಂದು ಪ್ರಶ್ನೆ ಬರುತ್ತದೆ, ಅದೇನೆಂದರೆ!

"ಮೊದಲನೆಯ ದಿನ ಬಂದಿರುವ ಮಹರ್ಷಿಗೆ ಮನೆಯೊಳಗೆ ಹೋದ ನಂತರ ಕಾಲು ತಟ್ಟೆಯಲ್ಲಿಟ್ಟು ತೊಳಿದಿದ್ದಾರೆ. ಎರಡನೆಯ ದಿನ ಬಂದಿರುವ

ರಾಜನಿಗೆ ಗೌರವವಾಗಿ ಮನೆಯ ಹೊರಗೇ ಕಾಲು ತೊಳೆದಿದ್ದಾರೆ. ರಾಜನ ಪಾದಗಳನ್ನು ತಟ್ಟೆಯಲ್ಲಿಟ್ಟು ತೊಳಿಯಬೇಕಾದ ಅವಶ್ಯವಿಲ್ಲದಿದ್ದರೂ, ರಾಜನ ಮನೆಯೊಳಗೆ ಬಂದ ನಂತರ ಆತನ ಪಾದಗಳನ್ನು ಹೊರಗೆ ತೊಳೆದ ಹಾಗೇ ತೊಳೆಯಬಹುದಲ್ಲವೆ! ಹಾಗೆ ಒಬ್ಬರಿಗೆ ಹೊರಗೆ ಮತ್ತೊಬ್ಬರಿಗೆ ಒಳಗೆ ತೊಳೆಯುವುದರಲ್ಲಿ ವಿಶೇಷವೇನಿದೆ?" ಎಂದು ಕೇಳಬಹುದು. ಅದಕ್ಕೆ ಉತ್ತರವನ್ನು ಹುಡಿಕಿದರೆ ಹೀಗೆ ಇದೆ. ಅಂದಿನ ಕಾಲದಲ್ಲೆ ಅಲ್ಲದೆ ಇಂದಿನ ಕಾಲದಲ್ಲಿಯೂ ಸಹ ನಮ್ಮ ಮಕ್ಕಳನ್ನು ಕಾಲು ತೊಳೆದುಕೊಂಡು ಮನೆಯೊಳಗೆ ಬರಬೇಕೆಂದು, ಕಾಲು ತೊಳೆಯದೇ ಮನೆಯೊಳಗೆ ಬರಬಾರದೆಂದು ಹೇಳುತ್ತಿರುತ್ತೇವೆ. ಇಂದಿಗೂ ಹಳ್ಳಿ ಊರುಗಳಲ್ಲಿ ಮನೆಗೆ ಬಂಧುಗಳು ಬಂದರೆ ಆತನಿಗೆ ಕಾಲು ತೊಳೆದುಕೊಳ್ಳುವುದಕ್ಕೆ ನೀರು, ಒರಿಸಿಕೊಳ್ಳುವುದಕ್ಕೆ ಟವಲು ಕೊಡುವುದು ನಡೆಯುತ್ತದೆ. ಹಾಗೆ ಕೊಟ್ಟರೇ ಬಂದಿರುವ ಅವರನ್ನು ಗೌರವಿಸಿದ ಹಾಗೆ ತಿಳಿಯುತ್ತಾರೆ. ಪ್ರಸ್ತುತ ಪಟ್ಟಣದಲ್ಲಿ ನಿವಾಸವಿರುವವರಿಗೆ ಕೊಳವೆ (ಟ್ಯಾಪ್), ಬಾತ್‌ರೂಮ್‌ಗಳು ಮನೆಯೊಳಗೆ ಇರುವುದರಿಂದ ನೀರು ಕೊಡುವ ಅವಶ್ಯವೇ ಇಲ್ಲದೇ ಹೋಗಿದೆ. ನಾವು ಚಿಕ್ಕ ವಯಸ್ಸಲ್ಲಿರುವಾಗ ಮನೆ ಹೊರಗೇ ಕಾಲು ತೊಳೆಯುವುದು ಇರುತ್ತಿತ್ತು. ಕಾಲು ತೊಳೆಯದೇ ಮನೆಯೊಳಗೆ ಬಂದರೆ, ಅವನಹಿಂದೆ ಶನೀಶ್ವರನು ಬರುತ್ತಾನೆಂದು ಹೇಳುತ್ತಿದ್ದರು. ಮನೆಯ ಹೊರಗೆ ಕಾಲು ತೊಳೆಯುವುದರಿಂದ, ಶನಿ ಮನೆಯೊಳಗೆ ಬಾರದೆ ಹೋಗುವನೆಂದೂ ಸಹ ಹೇಳುತ್ತಿದ್ದರು. 'ನಳ ಚರಿತ್ರೆ' ಅನ್ನುವ ಗ್ರಂಥದಲ್ಲಿ ನಳನು ಹೊರಗಿನಿಂದ ಮನೆಯೊಳಗೆ ಬರುವಾಗ ಕಾಲು ತೊಳೆದುಕೊಂಡು ಬಂದರೂ, ಪಾದದ ಹಿಂದಿನ ಭಾಗದಲ್ಲಿ ಸೂಜಿ ರಂಧ್ರದಷ್ಟು ಸ್ಥಳ ತೋಯದೆ ಇರುವುದರಿಂದ, ಶನಿ ಅದರಲ್ಲಿ ಇದ್ದು ನಳನ ಮನೆಯೊಳಗೆ ಬಂದಿದ್ದಾನೆಂದು, ನಂತರ ನಳಚಕ್ರವರ್ತಿಯನ್ನು, ಶನಿ ರಾಜ್ಯಭ್ರಷ್ಟನನ್ನು ಮಾಡಿ ಅನೇಕ ಕಷ್ಟಗಳ ಪಾಲು ಮಾಡಿದ್ದಾನೆಂದು ಗ್ರಂಥದಲ್ಲಿ ಬರೆದಿದ್ದಾರೆ. ಆದ್ದರಿಂದ ಪೂರ್ವದಲ್ಲಿ ಯಾರಾದರೂ ಮನೆಯ ಹೊರಗೇ ಕಾಲು ತೊಳೆದುಕೊಂಡು ಬರುವುದು ಅಭ್ಯಾಸವಾಗಿ ಇರುತ್ತಿತ್ತು.

ಯೋಗಿ ಯೊಂದರ ಪಾದ ಧೂಳಿಗೆ ಜ್ಞಾನಶಕ್ತಿ ಅಥವಾ ಯೋಗ ಶಕ್ತಿ ಅನ್ನುವುದು ಇರುತ್ತದೆ ಎಂದು ತಿಳಿದವರು, ಆ ದಿನ ಯೋಗಿಯನ್ನು ಮನೆಯೊಳಗೆ ಕರೆದುಕೊಂಡು ಹೋಗಿ ಪಾದಗಳನ್ನು ತೊಳೆದಿದ್ದಾರೆ. ಯೋಗಿ ಅಲ್ಲದವನು ಯಾರೇ ಆಗಲಿ, ರಾಜನಾಗಲಿ ಆತನ ಪಾದಧೂಳಿಗೆ ಶನಿ ಇರುತ್ತಾನೆ ಎಂದು, ಆತನ ಪಾದಗಳನ್ನು ಹೊರಗೇ ತೊಳೆಯುವುದು ನಡೆದಿದೆ. ಯೋಗಿ, ರಾಜ ಇಬ್ಬರೂ ವ್ಯಕ್ತಿಗಳೇ ಆದರೂ, ಅವರಲ್ಲಿನ ವ್ಯತ್ಯಾಸವನ್ನು ಅನುಸರಿಸಿ ಒಬ್ಬರಿಗೆ ಹೊರಗೆ, ಮತ್ತೊಬ್ಬರಿಗೆ ಒಳಗೆ ತೊಳೆಯುವುದು ನಡೆದಿದೆ. ಪಾದಗಳನ್ನು ಹೊರಗೇ ತೊಳೆಯಬೇಕೆಂದು, ಹಾಗೆ ತೊಳೆಯದೇ ಮನೆಯೊಳಗೆ ಬರಬಾರದೆನ್ನುವ ನಿಯಮವನ್ನು ಎಲ್ಲರೂ ಪಾಲಿಸುತ್ತಿರುವಾಗ, ಎಲ್ಲರಿಗೂ ಅದು ಒಪ್ಪುವಂತಹ ಕೆಲಸವಾದಾಗ, ಒಬ್ಬ ಯೋಗಿಗೆ ಆ ಸೂತ್ರವನ್ನು ಏಕೆ ಪಾಲಿಸಲಿಲ್ಲ? ಎಲ್ಲರಿಗೂ ಸೂತ್ರವಾದದ್ದು. ಅಥವಾ ಎಲ್ಲರಿಗೂ ಸಂಪ್ರದಾಯ ವಾದದ್ದು ಯೋಗಿಗೆ ಏಕೆ ಆಗಲಿಲ್ಲ? ಎಂದು ಕೇಳಬಹುದು. ಆದರೇ ಅವರಿಗಿರುವ ವ್ಯತ್ಯಾಸವನ್ನು ಅನುಸರಿಸಿ ಆ ಸೂತ್ರ, ಆ ಸಾಂಪ್ರದಾಯ ಅಲ್ಲಿ ಕೆಲಸಕ್ಕೆ ಬರಲಿಲ್ಲವೆಂದು ಹೇಳಬಹುದು. ಅದೇ ವಿಧವಾಗಿಯೇ ಅಧರ್ಮಗಳು ಜನ್ಮವನ್ನು ಉಂಟುಮಾಡುವವಾದರೂ, ನಾಲ್ಕು ಅಧರ್ಮಗಳನ್ನು ಧರ್ಮ ವಿರುದ್ಧಗಳೆಂದು ಅನ್ನಬಾರದು. ಪಾದಧೂಳಿಗೆ ಅಂಟಿಕೊಂಡು ಶನಿ ಬರುವ ನೆನ್ನುವ ಮಾತನ್ನು ಯೋಗಿಗೆ ಹೇಗೆ ಅನ್ವಯಿಸುವುದಿಲ್ಲವೋ, ಹಾಗೇ ಅಧರ್ಮಗಳಿಗೆ ಧರ್ಮವಿರುದ್ಧಗಳೆನ್ನುವ ಮಾತು ಕೂಡ ಅನ್ವಯಿಸುವುದಿಲ್ಲವೆಂದು ಹೇಳುತ್ತಿದ್ದೇವೆ. ಇಲ್ಲಿ ಮತ್ತೊಂದು ಪ್ರಶ್ನೆ ಉತ್ಪನ್ನವಾಗುತ್ತದೆ, ಅದೇನೆಂದರೆ! ಯೋಗಿ ಪಾದಗಳಿಗೆ ಯೋಗಶಕ್ತಿ ಇದೆ ಆದ್ದರಿಂದ, ಹೊರಗೆ ಪಾದಗಳನ್ನು ತೊಳೆಯಬೇಕೆನ್ನುವ ನಿಯಮವನ್ನು ಯೋಗಿ ಹತ್ತಿರ ಅನ್ವಯಿಸುವುದಿಲ್ಲ. ಆದರೇ ಇಲ್ಲಿ ಅಧರ್ಮಗಳನ್ನು ಧರ್ಮವಿರುದ್ಧಗಳು ಅಲ್ಲ ಎನ್ನುವುದಕ್ಕೆ ಅವುಗಳಿಗೆ ಯಾವ ಪ್ರತ್ಯೇಕತೆ ಇದೆಯೆಂದು ಕೇಳಬಹುದು. ಅದಕ್ಕೆ ಉತ್ತರ ಹೀಗೆ ಇದೆ.

ಧರ್ಮಕ್ಕೆ ವಿರುದ್ಧವಾದದ್ದು ಕರ್ಮ ಎಂದು ಹೇಳಿದಾಗ ಯಜ್ಞಗಳು ಮಾಡುವುದರಿಂದಲೂ ಸಹ ಪುಣ್ಯಕರ್ಮ ಬರುತ್ತದೆ ಆದ್ದರಿಂದ ಧರ್ಮ X ಕರ್ಮ ಆದಾಗ ಯಜ್ಞಗಳು ಧರ್ಮವಿರುದ್ಧವೇ ತಾನೆ! ಎಂದು ಅಂದರೇ ಯಜ್ಞಗಳು ವಾಸ್ತವವಾಗಿ, ಶಾಸ್ತ್ರಬದ್ಧವಾಗಿ ಧರ್ಮಕ್ಕೆ ವಿರುದ್ಧಗಳು ಅಲ್ಲವೆಂದು ಹೇಳಬಹುದು. ಯಾವ ವಿಧವಾಗಿ ಹೇಳಬಹುದೆಂದರೆ, ಧರ್ಮ X ಕರ್ಮ ಆದಾಗ ಧರ್ಮಕ್ಕೆ ವಿರುದ್ಧ ಕರ್ಮವೇ ಆಗುತ್ತದೆ. ಇಲ್ಲಿ ಸಮಸ್ಯೆ ಎಲ್ಲಾ ಕರ್ಮವನ್ನು ಕುರಿತಿರುವುದೇ ಎಂದು ಹೇಳಬಹುದು. ಕರ್ಮ ಎಂದರೆ ಪಾಪ ಮತ್ತು ಪುಣ್ಯವನ್ನು ಬೆರೆತಿರುವುದನ್ನು ಕರ್ಮ ಅನ್ನುತ್ತಿದ್ದೇವೆ. ಪಾಪ + ಪುಣ್ಯ ಎರಡೂ ಯಾವ ನಿಷ್ಪತ್ತಿಯಲ್ಲಿ ಇದ್ದರೂ ಅದನ್ನು ಕರ್ಮ ಎಂದು ಹೇಳಬಹುದು. ಅನ್ನ ಮತ್ತು ಸಾಂಬಾರನ್ನು ಸೇರಿಸಿ ಭೋಜನ ಎಂದು ಹೇಳಬಹುದು. ಕೇವಲ ಅನ್ನವನ್ನು ಮಾತ್ರ ಭೋಜನ ಅನ್ನುವುದಿಲ್ಲ ಹಾಗೇ ಅನ್ನವಿಲ್ಲದೇ ಸಾಂಬಾರನ್ನು ಮಾತ್ರ ಭೋಜನ ಎಂದು ಅನ್ನುವುದಿಲ್ಲ. ಅನ್ನವನ್ನೂ ಸಾಂಬಾರನ್ನೂ ಎರಡನ್ನೂ ಸೇರಿಸಿ ಭೋಜನ ಅಂದರೆ ಯಾರಾದರೂ ಒಪ್ಪಿಕೊಳ್ಳುತ್ತಾರೆ. ಹಾಗೇ ಪಾಪ ಮತ್ತು ಪುಣ್ಯವನ್ನು ಸೇರಿಸಿ ಹೇಳಿದಾಗ ಕರ್ಮ ಎಂದು ಅನ್ನಬಹುದು. ಅನ್ನವನ್ನು ಮಾತ್ರವೇ ಭೋಜನ ಎಂದು ಹೇಗೆ ಅನ್ನುವುದಿಲ್ಲವೋ, ಹಾಗೇ ಒಂದೇ ಪುಣ್ಯವನ್ನು ಕರ್ಮ ಎಂದು ಅನ್ನುವುದಿಲ್ಲ. ಹಾಗೆ ಒಂದೇ ಪಾಪವನ್ನೂ ಸಹ ಕರ್ಮ ಅನ್ನುವುದಿಲ್ಲ. ಧರ್ಮಕ್ಕೆ ವಿರುದ್ಧವಾದದ್ದು ಕರ್ಮವಾದಾಗ, ಕೇವಲ ಪುಣ್ಯವನ್ನು ತಂದಿಡುವ ಬಾಹ್ಯ ಯಜ್ಞಗಳು ಧರ್ಮಕ್ಕೆ ವಿರುದ್ಧಗಳು ಅಲ್ಲ ಎಂದು ಹೇಳಬಹುದು.

ಯಾವಾದರೆ ಧರ್ಮಗಳೂ ಅಲ್ಲದೇ, ಅಧರ್ಮಗಳೂ ಅಲ್ಲದೇ ಇವೆಯೋ ಅವೆಲ್ಲವೂ ಧರ್ಮವಿರುದ್ಧ ಕೆಲಸಗಳಾಗಿ ಹೇಳಲಾಗುತ್ತವೆ, ಅಷ್ಟೇ ಅಲ್ಲದೇ ಪುಣ್ಯ ಪಾಪಗಳ ಮಿಶ್ರಣ ಕರ್ಮವನ್ನು ತಂದಿಡುತ್ತವೆ. ಮೂರು ಧರ್ಮಗಳ, ನಾಲ್ಕು ಅಧರ್ಮಗಳ ಕೆಲಸಗಳನ್ನು ಬಿಟ್ಟು ಉಳಿದ ಕಾರ್ಯಗಳು ಯಾವಾದರೆ ಇವೆಯೋ, ಅವೆಲ್ಲವೂ ಕರ್ಮವನ್ನು ತಂದಿಟ್ಟು ಜನ್ಮಕ್ಕೆ ಕಳುಹಿಸುತ್ತವೆ.

ಉದಾಹರಣೆಗೆ ವ್ಯವಸಾಯವನ್ನು ತೆಗೆದುಕೊಳ್ಳೋಣ. ವ್ಯವಸಾಯ ಕಾರ್ಯಗಳು ಇತ್ತ ಧರ್ಮಕ್ಕೆ ಸಂಬಂಧಿಸಿರುವವೂ ಅಲ್ಲ. ಅತ್ತ ಅಧರ್ಮಗಳಿಗೆ ಸಂಬಂಧಿಸಿರುವವೂ ಅಲ್ಲ. ಆದ್ದರಿಂದ ಆ ಕಾರ್ಯಗಳನ್ನು ಧರ್ಮವಿರುದ್ಧವಾದ ಕರ್ಮ ಕಾರ್ಯಗಳಾಗಿ ಹೇಳಿಕೊಳ್ಳಬಹುದು. ಈ ವಿಧವಾಗಿ ಅನೇಕ ರಂಗಗಳಲ್ಲಿ, ಅನೇಕ ಕಾರ್ಯಗಳು ಧರ್ಮ ವಿರುದ್ಧವಾದವುಗಳಾಗಿ ಕರ್ಮವನ್ನು ಅಂಟಿಸುವ ಕೆಲಸಗಳಾಗಿ ಇವೆ. ಕೆಲವರು ಈಗ ಮತ್ತೊಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಆ ಪ್ರಶ್ನೆ ಏನೆಂದರೆ! "ದೈವಜ್ಞಾನವನ್ನು ಬೋಧಿಸುವ ಬೋಧಕರು ಧರ್ಮವನ್ನು ಆಚರಿಸುತ್ತಿದ್ದಾರಾ? ಅಧರ್ಮವನ್ನು ಆಚರಿಸುತ್ತಿದ್ದಾರಾ?" ಎಂದು ಕೇಳಬಹುದು. ಅದನ್ನು ಕುರಿತಾದ ವಿವರವನ್ನು ಈಗ ಹೇಳಿಕೊಳ್ಳೋಣ. ದೈವಜ್ಞಾನವನ್ನು ಬೋಧಿಸುವವರು ಒಂದು ಡ್ರಾಮಾ ನಟನಂತೆ ಕೆಲವು ಬೋಧನೆಗಳನ್ನು ಕಲಿತಿರುವವನಾಗಿ ನಾಟಕಗಳಲ್ಲಿ ಚೆನ್ನಾಗಿ ನಟಿಸಿದ ಹಾಗೆ, ಜ್ಞಾನ ಹೇಳುವುದರಲ್ಲಿ ತರಭೇತಿ ಹೊಂದಿ ತಾನು ಕಲಿತಿರುವುದನ್ನು ಬೋಧಿಸುತ್ತಿದ್ದಾನೆ. ಬೋಧಿಸುವ ಉದ್ಯೋಗವನ್ನು ಮಾಡುವವನನ್ನು ಟೀಚರ್ (ಬೋಧಕನು) ಎಂದು ಅನ್ನುತ್ತೇವೆ. ಬೋಧಕನು ತಾನು ಬೋಧಿಸುವ ಬೋಧನೆಯನ್ನು ಸ್ಕೂಲಿನಲ್ಲಿ ಪಾಠಗಳಾಗಿ ಬೋಧಿಸಿದರೆ, ಅದು ಧರ್ಮವಲ್ಲ, ಹಾಗೇ ಅದು ಅಧರ್ಮವೂ ಅಲ್ಲ. ಜ್ಞಾನವನ್ನು ಬೋಧಿಸುವವನು ತನ್ನ ದೃಷ್ಠಿಯನ್ನು ಜ್ಞಾನದ ಮೇಲೆ ಇಡದೆ, ಉಪನ್ಯಾಸಗಳ ಮೇಲೆ ಇಟ್ಟು, ಕೇಳುವವರಿಗೆ ಜ್ಞಾನ ಬೇಕು, ನನಗೆ ಹಣ ಬೇಕು ಆದ್ದರಿಂದ ಬೋಧಿಸುತ್ತಿದ್ದೇನೆಂದು ಬೋಧಿಸುವುದನ್ನು ಸಂಬಳ ಬರುವ ಉದ್ಯೋಗದಂತೆ ಭಾವಿಸುವ ಅವನು ಧರ್ಮಾಧರ್ಮಗಳಿಗೆ ಸಂಬಂಧವಿಲ್ಲದ ಕಾರ್ಯ ಮಾಡುತ್ತಿದ್ದಾನೆ. ಆದ್ದರಿಂದ ಅಂತಹವರಿಗೆ ಪಾಪ ಪುಣ್ಯಗಳ ಮಿಶ್ರಣ ಕರ್ಮ ಬಂದು ಸೇರುತ್ತದೆ. ಒಬ್ಬ ಸ್ವಾಮೀಜಿ ಒಂದು ಉಪನ್ಯಾಸ ಕಾರ್ಯವನ್ನು ಮಾಡಬೇಕೆಂದು, ಆ ವಿಷಯ ಎಲ್ಲರಿಗೂ ತಿಳಿಯುವಹಾಗೆ ಇಂತಹ ಸ್ವಾಮೀಜಿ ಭಗವದ್ಗೀತೆಯನ್ನು ಹೇಳುವರೆಂದು ತಿಳಿಯುವಹಾಗೆ, ಅಲ್ಲಿ ಒಂದು ಬೋರ್ಡು ಕಟ್ಟುವುದು ನಡೆದಿದೆ. ಆ ಬೋರ್ಡಿನಲ್ಲಿ 53ನೇ ಗೀತಾಯಜ್ಞವನ್ನು ನಕ್ಕತಿಕ್ಕ ಸ್ವಾಮೀಜಿ 16ನೇ ತಾರೀಖಿ

ನಿಂದ 26ನೇ ತಾರೀಖಿನ ವರೆಗು ನಿರ್ವಹಿಸುವನೆಂದು ಬರೆಯುವುದು ನಡೆದಿದೆ. ಸ್ವಾಮೀಜಿಯಾಗಿರುವ ಒಬ್ಬ ವ್ಯಕ್ತಿ ಭಗವದ್ಗೀತೆಯನ್ನು ಬೋಧಿಸುತ್ತಿದ್ದೇನೆ ಎಂದು ಹೇಳದೇ ಗೀತಾಯಜ್ಞವನ್ನು ಮಾಡುತ್ತಿದ್ದೇನೆಂದು ಬರೆದಿದ್ದಾನೆ.

ಈ ಗ್ರಂಥದ ಪ್ರಾರಂಭದಲ್ಲೇ ಯಜ್ಞ ಅನ್ನುವ ಪದಕ್ಕೆ ಶಾಸ್ತ್ರೀಯವಾದ ಅರ್ಥವನ್ನು ತೆಗೆದುಕೊಂಡಿದ್ದೇವೆ. ಅಲ್ಲಿ ಯಜ್ಞ ಎಂದರೆ ಇರುವುದನ್ನು ಇಲ್ಲದೇ ಮಾಡುವುದೆಂದು, ನಾಶ ಮಾಡುವುದೆಂದೂ, ಸುಟ್ಟುಹಾಕುವುದೆಂದೂ ಹೇಳಿಕೊಂಡಿದ್ದೇವೆ. ಅಷ್ಟೇ ಆಗಲಿ ಯಜ್ಞ ಎಂದರೆ ಆರಾಧನೆ ಎಂದು ಎಲ್ಲೂ ಹೇಳಲಿಲ್ಲ. ಬಾಹ್ಯ ಯಜ್ಞಗಳಲ್ಲಿ ಕಾಣಿಸುವುದೇನೊ ಎಲ್ಲರಿಗೂ ತಿಳಿದಿದೆ. ಬಾಹ್ಯ ಯಜ್ಞಗಳು ದೇವರು ಹೇಳಿದ ಜ್ಞಾನಕ್ಕೆ ನಮೂನೆಯಂತೆ ತಯಾರು ಮಾಡಿರುವವೆಂದು ತಿಳಿಯಬೇಕು. ಯಜ್ಞಗಳನ್ನು ಯಾವ ವಿಧವಾಗಿ ನೋಡಿದರೂ ಯಾವುದೋ ಒಂದನ್ನು ನಾಶ ಮಾಡುವವುಗಳಾಗಿ ಇವೆಯೆಂದು ತಿಳಿಯುತ್ತಿದೆ. ಜ್ಞಾನಬೋಧಕರಾದ ಸ್ವಾಮೀಜಿಗಳು ಎಲ್ಲಾದರೂ ಆಧ್ಯಾತ್ಮಿಕ ಜ್ಞಾನವನ್ನು ಬೋಧಿಸುವುದಕ್ಕೆ ಬಂದಿರುವಾಗ ಕಳೆದ ದಿನಗಳಲ್ಲಿ ಇಷ್ಟು ಬಾರಿ ಉಪನ್ಯಾಸ ಕಾರ್ಯವನ್ನು ಮಾಡಿದ್ದೇನೆಂದು, ಪ್ರಸ್ತುತ ಇಷ್ಟನೇಬಾರಿ ಮಾಡುತ್ತಿದ್ದೇ ನೆಂದು, ಆ ಸಂಖ್ಯೆಯನ್ನು ಬೋರ್ಡು ಮೇಲೆ ಹೀಗೆ ಬರೆಯುತ್ತಿದ್ದಾರೆ. 53ನೇ ಜ್ಞಾನಯಜ್ಞ ಇಂತಹಾ ಸ್ವಾಮೀಜಿಗಳಿಂದ ಮಾಡಲಾಗುತ್ತಿದೆಯೆಂದು ಬರೆಯುವುದು ನಡೆಯುತ್ತದೆ. ಗೀತೆಯನ್ನು ಬೋಧಿಸುವ ಸ್ವಾಮೀಜೀ 53ನೇ ಗೀತಾ ಯಜ್ಞವೆಂದು ಬರೆದು ತಾನು ಹಿಂದೆ 52 ಬಾರಿ ಗೀತೆಯನ್ನು ಬೋಧಿಸಿದ್ದೇನೆ, ಈಗ 53ನೇ ಬಾರಿ ಬೋಧಿಸುತ್ತಿದ್ದೇನೆಂದು ಹಾಗೆ ತಿಳಿಸಲಾಗಿದೆ. ಈ ಮಧ್ಯೆ ಕಾಲದಲ್ಲಿ ಒಂದು ಹೆಸರಿರುವ ಸ್ವಾಮೀಜಿ ತಾನು ಗತದಲ್ಲಿ 149 ಬಾರಿ ಭಗವದ್ಗೀತೆಯನ್ನು ಬೋಧಿಸಿದ್ದೇನೆಂದು, ಈಗ 150ನೇ ಬಾರಿ ಹೇಳುತ್ತಿದ್ದೇನೆಂದು ತಿಳಿಯುವಹಾಗೆ, 150ನೇ ಗೀತಾ ಯಜ್ಞವನ್ನು ಮಾಡುತ್ತಿದ್ದೇನೆಂದು ಬರೆದಿದ್ದಾನೆ. ಅದನ್ನು ನೋಡಿದ ಒಬ್ಬ ವಿದ್ಯಾರ್ಥಿ 150ನೇ ಗೀತೆ ಯಜ್ಞದಲ್ಲಿ ಪ್ರತ್ಯೇಕವಾಗಿ ಯಾವ ವಸ್ತುಗಳನ್ನು ಹಾಕುತ್ತಾರೆಂದು, ತುಪ್ಪ

ಎಷ್ಟು ಹಾಕುತ್ತಾರೆಂದು ನನ್ನನ್ನು ಕೇಳಿದ್ದಾನೆ. ಆ ಬಾಲಕನು ಕೇಳಿರುವುದರಲ್ಲಿ ತಪ್ಪಿಲ್ಲ. ಯಜ್ಞವೆಂದರೆ ಗುಂಡಿಯಲ್ಲಿ ಅಗ್ನಿಯನ್ನಿಟ್ಟು, ತುಪ್ಪ ಮೊದಲಾದ ವಸ್ತುಗಳನ್ನು ಅದರಲ್ಲಿ ಹಾಕುವುದನ್ನು ನೋಡಿದ ಆ ವಿದ್ಯಾರ್ಥಿ, 150ನೇ ಯಜ್ಞ ಅನ್ನುತ್ತಲೇ ಅದರಲ್ಲಿ ಪ್ರತ್ಯೇಕತೆ ಏನು ಎಂದು ಕೇಳುವುದರಲ್ಲಿ ತಪ್ಪಿಲ್ಲ. ಆದರೆ ಬೋಧನೆಗಳನ್ನು ಯಜ್ಞವೆಂದು ಬರೆದವರದೇ ತಪ್ಪು. ಆ ವಿದ್ಯಾರ್ಥಿಗೆ ಇಲ್ಲಿ ತುಪ್ಪ ಹಾಕುವುದಿಲ್ಲ, ವಸ್ತುಗಳನ್ನು ಹಾಕುವುದಿಲ್ಲ, ಭಗವದ್ಗೀತೆಯನ್ನು ಬೋಧಿಸುವುದಕ್ಕೆ ಬರೆದಿದ್ದಾರೆಂದು ನಾನು ಹೇಳಿದರೆ, ತಕ್ಷಣವೆ ಆ ಬಾಲಕನು "ಭಗವದ್ಗೀತೆಯನ್ನು 150ನೇ ಬಾರಿ ಯಜ್ಞಕುಂಡದಲ್ಲಿ ಹಾಕುತ್ತಾರಾ, ಅಥವಾ 150 ಭಗವದ್ಗೀತೆಗಳನ್ನು ಯಜ್ಞಕುಂಡದಲ್ಲಿ ಹಾಕುತ್ತಾರಾ" ಎಂದು ಕೇಳಿದನು. ಆ ಮಾತುಗಳನ್ನು ಕೇಳಿದ ನನಗೆ ಒಂದು ಕಡೆ ನಗುಬರುತ್ತಿದ್ದರೂ ತಡೆದು, ಆತನು ಕೇಳುವುದರಲ್ಲಿ ತಪ್ಪಿಲ್ಲವೆಂದು ಹೀಗೆ ಹೇಳಿದ್ದೇನೆ. "ಅಲ್ಲಿ ಉಪನ್ಯಾಸವನ್ನು ಹೇಳುವ ಸ್ವಾಮೀಜಿ ಅವರು ಇದಕ್ಕೂ ಮೊದಲು ಬಹಳ ಕಡೆ 149 ಬಾರಿ ಭಗವದ್ಗೀತೆಯನ್ನು ಬೋಧಿಸಿದ್ದೇನೆಂದು, ಈಗ 150ನೇ ಬಾರಿ ಇಲ್ಲಿ ಬೋಧಿ ಸುತ್ತಿದ್ದೇನೆಂದು, ತಿಳಿಯುವುದಕ್ಕೆ 150ನೇ ಗೀತಾ ಜ್ಞಾನಯಜ್ಞವೆಂದು ಬರೆದಿದ್ದಾನೆ" ಎಂದು ಹೇಳಿದೆನು. ಅದಕ್ಕೆ ಆ ವಿದ್ಯಾರ್ಥಿ ಆಶ್ಚರ್ಯವಾಗಿ ನನ್ನ ಕಡೆ ನೋಡುತ್ತಾ ಹೀಗೆ ಅಂದಿದ್ದಾನೆ. "ಅದಕ್ಕೆ 150ನೇ ಯಜ್ಞವೆಂದು ಏಕೆ ಬರೆಯಬೇಕು? 150ನೇ ಗೀತಾ ಜ್ಞಾನಬೋಧನೆ ಎಂದು ಬರೆಯಬಹುದಲ್ಲ! ಹೇಳುವುದು ಬೋಧನೆ ಆಗಿರುವಾಗ, ಮಾಡುತ್ತಿರುವ ಯಜ್ಞದ ಹೆಸರನ್ನು ಏಕೆ ಬರೆಯಬೇಕು? 150ನೇ ಗೀತಾ ಜ್ಞಾನಯಜ್ಞ ಅಂದರೇ 150ನೇ ಬಾರಿ ಗೀತಾ ಜ್ಞಾನವನ್ನು ಸುಡುತ್ತಿದ್ದೇನೆಂದು ಹೇಳಿದಹಾಗೆ ತಾನೆ! ಸ್ವಾಮಿಗಳಾದವರು ಹಾಗೆ ಬರೆದರೆ ಏನೂ ತಿಳಿಯದ ನಾವು ಹೇಗೆ ಅರ್ಥ ಮಾಡಿಕೊಳ್ಳಬೇಕು? ಆದರೂ ಯಜ್ಞವೆಂದರೆ ಎಲ್ಲರಿಗೂ ಸುಡುವುದೆಂದೆ ತಿಳಿದಿರುವಾಗ, ಯಜ್ಞ ಸುಡುವು ದಕ್ಕೋಸ್ಕರವೇ ಮಾಡುತ್ತಿರುವಹಾಗೆ ಪ್ರತ್ಯಕ್ಷವಾಗಿ ಕಾಣಿಸುತ್ತಿದ್ದರೇ, ನೀವು 150ನೇ ಗೀತಾ ಜ್ಞಾನಯಜ್ಞವೆಂದು ಬರೆದಿರುವಾಗ, ಗೀತೆಯನ್ನು 150 ಬಾರಿ ಸುಡುತ್ತಿದ್ದಾರೆಂದು ನಾವು ಅಂದುಕೊಳ್ಳದೆ ಏನೆಂದು ಅಂದುಕೊಳ್ಳಬೇಕು?

ನೀವು ಗೀತೆಯನ್ನು 150ನೇ ಬಾರಿ ಬೋಧಿಸುತ್ತಿದ್ದೀರೆಂದು ತಿಳಿಯುವುದಕ್ಕೆ, ನೀವು ಬರೆದಿರುವುದರಲ್ಲಿ ಯಾವ ಆಧಾರವಾದರೂ ಇದೆಯಾ?" ಎಂದು ಕೇಳಿದ್ದಾನೆ. ಆ ಮಾತುಗಳನ್ನು ಕೇಳಿದ ನಾನು "ಸ್ವಾಮೀಜಿಯರು ಹೀಗೆ ಹೇಳುವುದು ತಪ್ಪು, ಹಾಗೆ ಬರೆದಿರಬಾರದು. ಹಾಗೆ ಬರೆಯುವುದರಿಂದ ಗೀತೆಯನ್ನು ಸುಡುತ್ತಿದ್ದೇವೆನ್ನುವ ಅರ್ಥವೇ ಬರುತ್ತದೆ ಹೊರತು ಗೀತೆಯನ್ನು ಬೋಧಿಸುತ್ತಿದ್ದೇವೆನ್ನುವ ಅರ್ಥ ಬರುವುದಿಲ್ಲ". ಎಂದು ಹೇಳಿದೆನು.

ಕಾಣಿಸುವ ಯಜ್ಞಗಳು, ಕಾಣಿಸದ ಯಜ್ಞಗಳು ಎಂದು ಎರಡು ವಿಧಗಳ ಯಜ್ಞಗಳಲ್ಲಿ ಬಾಹ್ಯವಾಗಿ ಎಲ್ಲರೂ ಮಾಡುವ ಕಾಣಿಸುವ ಯಜ್ಞವನ್ನೇ ಕುರಿತು ಇಲ್ಲಿಯವರೆಗು ಹೇಳಿಕೊಂಡಿದ್ದೇವೆ. ದೇವರು ಯಜ್ಞಗಳನ್ನು ಕುರಿತು ಗೀತೆಯಲ್ಲಿ ಹೇಳಿದ್ದಾನೆ. ಭಗವದ್ಗೀತೆಯಲ್ಲಿ ದ್ರವ್ಯಯಜ್ಞ, ಜ್ಞಾನಯಜ್ಞ ಎಂದು ಎರಡು ಕಾಣಿಸದ ಯಜ್ಞಗಳ ಹೆಸರುಗಳನ್ನು ಹೇಳಿದರೂ, ಆ ಎರಡರಲ್ಲಿ ದ್ರವ್ಯಯಜ್ಞಕ್ಕಿಂತಲೂ ಜ್ಞಾನ ಯಜ್ಞವೇ ಶ್ರೇಷ್ಟವಾದದ್ದೆಂದು ಹೇಳಿದ್ದಾನೆ. ದೇವರು ಹೇಳಿದ ಎರಡು ಯಜ್ಞಗಳು ಶರೀರದ ಒಳಗೆ ಕಾಣಿಸದೇ ನಡೆಯುವವು. ಕಾಣಿಸದೇ ನಡೆಯುವವು ಹೇಗೆ ಇರುತ್ತವೋ ಎಲ್ಲರಿಗೂ ತಿಳಿಯದು. ಆದ್ದರಿಂದ ಕೆಲವರು ಜ್ಞಾನವನ್ನು ತಿಳಿದ ಹಿರಿಯರು ದೇವರು ಹೇಳಿದ ಕಾಣಿಸದ ಯಜ್ಞಗಳನ್ನು ತಮ್ಮ ಜ್ಞಾನದೃಷ್ಠಿಯಿಂದ ತಿಳಿದವರಾಗಿ ಸಾಧಾರಣ ವ್ಯಕ್ತಿಗಳಿಗೆ ಯಜ್ಞ ಅಂದರೆ ಹೀಗಿರುತ್ತದೆಂದು ತಿಳಿಸುವ ನಿಮಿತ್ತ ಬಾಹ್ಯವಾಗಿ ಯಜ್ಞ ಕುಂಡವನ್ನು ತಯಾರಿಸಿ, ಅದರಲ್ಲಿ ಅಗ್ನಿಯನ್ನು ಹಾಕಿ, ಅದರೊಳಗೆ ಅನೇಕ ವಿಧಗಳ ವಸ್ತುಗಳು, ಎಣ್ಣೆ, ವಸ್ತ್ರಗಳು, ಔಷಧಗಳು, ಲೋಹಗಳನ್ನು ಹಾಕಿ ಸುಟ್ಟು ತೋರಿಸುತ್ತಿದ್ದರು. ಹಾಗೆ ತೋರಿಸುವುದರಿಂದ ಯಜ್ಞವೆಂದರೇ ಹೀಗಿರುತ್ತದೆಂದು ನಮೂನೆ ಮನುಷ್ಯನಿಗೆ ತಿಳಿದುಹೋಗುತ್ತದೆ. ಮೊದಲು ಯಜ್ಞವೊಂದರ ನಮೂನೆಯ ದೃಶ್ಯವನ್ನು ನೋಡಿದ ನಂತರ ಯಜ್ಞವೆಂದರೆ ಏನು? ಅದರಲ್ಲಿನ ಅಗ್ನಿ ಯಾವುದಕ್ಕೆ ಗುರುತು? ಅಗ್ನಿಯೊಳಗೆ ಹಾಕುವ ವಸ್ತುಗಳು ಯಾವುದಕ್ಕೆ ಗುರುತು? ಯಜ್ಞಗಳನ್ನು ಮಾಡುವ ಋತ್ವಿಕನು ಯಾರಿಗೆ

ಗುರುತು? ಎಂದು ಬಾಹ್ಯ ಯಜ್ಞಗಳಲ್ಲಿನ ಎಲ್ಲಾ ಜ್ಞಾನವನ್ನು ತಿಳಿಯುವುದಾದರೆ, ಶರೀರಾಂತರ್ಗತದಲ್ಲಿ ನಡೆಯುವ ಯಜ್ಞಗಳ ವಿವರ ತಿಳಿದು ಹೋಗುವುದು. ದೇವರು ಶರೀರದಲ್ಲಿ ನಡೆಯುವ ಜ್ಞಾನ ಯಜ್ಞವನ್ನು ಕುರಿತು ಭಗವದ್ಗೀತೆಯಲ್ಲಿ ವಿವರವಾಗಿ ಹೇಳಿರುವಾಗ, ದೇವರು ಯಜ್ಞವನ್ನು ಕರಿತು ಹೇಳಿದ್ದಾನೆಂದು ಬಹಳ ಜನ ಗುರುತಿಸದೆ ಹೋಗಿದ್ದಾರೆ. ಜ್ಞಾನದ ಮೇಲೆ ಶ್ರದ್ಧೆಯಿರುವ ಬಹುಸ್ವಲ್ಪ ಜನರು ಮಾತ್ರ ಶರೀರದಲ್ಲಿನ ಜ್ಞಾನಯಜ್ಞವನ್ನು ದೇವರು ಹೇಳಿದಹಾಗೆ ಗ್ರಹಿಸಿದ್ದಾರೆ. ಶರೀರಾಂತರ್ಗತ ಜ್ಞಾನ ಯಜ್ಞವನ್ನು ಗ್ರಹಿಸಿದ ಜ್ಞಾನಿಗಳು ಅದನ್ನು ಮನುಷ್ಯರಿಗೆ ಬೋಧಿಸುವುದಕ್ಕೆ, ದೇವರು ಹೇಳಿದ ಜ್ಞಾನಯಜ್ಞಗ್ಗಳ ಹಾಗೆ ಇರುವ ಹೊರಗಿನ ಯಜ್ಞವನ್ನು ತಯಾರು ಮಾಡಿ ತೋರಿಸಿದ್ದಾರೆ. ಬಾಹ್ಯ ಯಜ್ಞದಲ್ಲಿನ ಪ್ರತಿ ವಿಷಯಕ್ಕೂ ಒಳಗಿನ ಯಜ್ಞವೊಂದರ ಹೋಲಿಕೆಯನ್ನು ಹೇಳುವುದರಿಂದ, ಭಗವದ್ಗೀತೆಯಲ್ಲಿ ಹೇಳಿದ ಜ್ಞಾನಯಜ್ಞ ಪೂರ್ತಿಯಾಗಿ ಮನುಷ್ಯರಿಗೆ ಅರ್ಥವಾಗಿ ಹೋಗುವುದೆಂದು ತಿಳಿದಿದ್ದಾರೆ. ಹಾಗೆ ತಿಳಿದವರು ಬಾಹ್ಯ ಯಜ್ಞಗಳನ್ನು ತಯಾರಿಸಿ ಅವುಗಳನ್ನು ಉರಿಯುವಂತೆ ಮಾಡಿ, ಅದರೊಳಗೆ ಯಜ್ಞದ ಸಾಮಾಗ್ರಿಯನ್ನು ಮಂತ್ರ ಹೇಳುತ್ತಾ ಹಾಕಿ ತೋರಿಸುವುದು ನಡೆದಿದೆ. ಒಟ್ಟಿನಲ್ಲಿ  ಸೂಕ್ಷ್ಮವಾಗಿರುವ ಯಜ್ಞವನ್ನು ಸ್ಥೂಲವಾಗಿ ತೋರಿಸುವುದು ನಡೆದಿದೆ. ಆ ದಿನಗಳಲ್ಲಿ ಒಳ್ಳೆಯ ಉದ್ದೇಶದಿಂದ ತಯಾರು ಮಾಡಿದ ಬಾಹ್ಯಯಜ್ಞ ಇಂದಿಗೂ ಇದ್ದರೂ, ಅದು ಶರೀರಾಂತರ್ಗತ ಜ್ಞಾನಯಜ್ಞಕ್ಕೆ ನಮೂನೆಯಂತೆ ಮಾಡಲಾಗಿದೆಯೆಂದು ಯಾರಿಗೂ ತಿಳಿಯದಂತೆ ಹೋಗಿದೆ. ದೇವರು ಹೇಳಿದ ಮೂರು ಧರ್ಮಗಳ ಸಾರಾಂಶವಾದ ಜ್ಞಾನಯಜ್ಞ ಪೂರ್ವವೇ ತ್ರೇತಾಯುಗದಲ್ಲೇ ಅರ್ಥ ತಿಳಿಯದ ಬಾಹ್ಯ ಯಜ್ಞವಾಗಿ ಬದಲಾಗಿ ಹೋಗಿ ನಾಲ್ಕು ಅಧರ್ಮಗಳಲ್ಲಿ ಒಂದಾಗಿದೆ.

ಭಗವದ್ಗೀತೆಯಲ್ಲಿ ದೇವರು ತಿಳಿಸಿದ ಶರೀರಾಂತರ್ಗತ ಜ್ಞಾನಯಜ್ಞ ವನ್ನು ಗ್ರಹಿಸಿದ ಜ್ಞಾನಿಗಳು, ಪ್ರಜೆಗಳಿಗೆ ಜ್ಞಾನಯಜ್ಞವನ್ನು ಕುರಿತು ತಿಳಿಸುವ ನಿಮಿತ್ತ ಬಾಹ್ಯಯಜ್ಞಗಳನ್ನು ತಯಾರು ಮಾಡಿ ತೋರಿಸಬೇಕೆಂದು, ಆ ವಿಧವಾಗಿ

ನಮೂನೆಯನ್ನು ತೋರಿಸುವುದರಿಂದ ಶರೀರದಲ್ಲಿನ ಜ್ಞಾನಯಜ್ಞವನ್ನು ಪ್ರಜೆಗಳು ಸುಲಭವಾಗಿ ತಿಳಿಯಬಲ್ಲರೆಂದು, ಒಳ್ಳೆ ಭಾವನೆಯಿಂದ ಅಂದುಕೊಂಡರೂ, ಆ ಪ್ರಯತ್ನ ಸಫಲವಾಗದೆ ವಿಫಲವಾಗಿ ಹೋಗಿದೆ. ಶರೀರದಲ್ಲಿನ ಧರ್ಮ ಶರೀರದ ಹೊರಗೆ ಅಧರ್ಮವಾಗಿ ತಯಾರಾಗಿದೆ. ಆದರೂ ಆ ದಿನದ ಜ್ಞಾನಿಗಳು ಒಳ್ಳೆಯ ಉದ್ದೇಶದಿಂದ ತಯಾರು ಮಾಡಿದ ಬಾಹ್ಯ ಯಜ್ಞ, ಜ್ಞಾನಯಜ್ಞ ವೊಂದರ ನಮೂನೆ ಅಲ್ಲದೇ, ಅಜ್ಞಾನ ಯಜ್ಞ ನಮೂನೆ ಆಗಿಹೋಗಿದೆ. ಜ್ಞಾನಿಗಳು ಒಳ್ಳೆ ಭಾವದಿಂದ ಮಾಡಿದ ಕಾರ್ಯ ಹಾಗೆ ವಿಫಲವಾಗಿ, ಅಧರ್ಮಯುಕ್ತವಾಗಿ ಹೋಗುವುದಕ್ಕೆ ಕಾರಣ ಏನಾಗಿರಬಹುದು ಎಂದು ಯೋಚಿಸಿದರೆ, ಇಲ್ಲಿಯ ವರೆಗು ಜ್ಞಾನಿಗಳು ಸಹಿತ  ಗುರ್ತಿಸದ ಒಂದು ವಿಷಯ ತಿಳಿಯುತ್ತಿದೆ, ಅದೇನೆಂದರೆ!

ದೇವರು ಭಗವದ್ಗೀತೆಯಲ್ಲಿ ಶರೀರದಲ್ಲಿ ಕಾಣಿಸದೇ ನಡೆಯುವ ಜ್ಞಾನಯಜ್ಞವನ್ನು ತಿಳಿಸಿದಾಗಲೇ, ಜ್ಞಾನಯಜ್ಞ ವಿವರವಾಗಿ ತಿಳಿಯುವುದಕ್ಕೆ ಧರ್ಮಕ್ಕೆ ಸಂಬಂಧವಿಲ್ಲದ ದ್ರವ್ಯ ಯಜ್ಞವೆನ್ನುವುದನ್ನು ನಮೂನೆಯಂತೆ ಹೇಳಿದ್ದಾನೆ. ದೇವರು ತಿಳಿಸಿದ ದ್ರವ್ಯಯಜ್ಞ ವೊಂದರ ನಮೂನೆಯನ್ನನುಸರಿಸಿ ಜ್ಞಾನ ಯಜ್ಞವನ್ನು ಯಾರಾದರೂ ತಿಳಿಯಬಹುದೆಂದು, ಆ ದಿನ ಗೀತೆಯಲ್ಲೇ ದ್ರವ್ಯಯಜ್ಞ ವೊಂದರ ಪ್ರಸ್ತಾವನೆ ಬಂದಿದೆ. ಜ್ಞಾನಯಜ್ಞವನ್ನು ಮನುಷ್ಯರು ಅರ್ಥ ಮಾಡಿಕೊಳ್ಳುವ ನಿಮಿತ್ತ, ದ್ರವ್ಯಯಜ್ಞವನ್ನು ಹೋಲಿಕೆಯಾಗಿ ದೇವರೇ ತನ್ನ ಗೀತೆಯಲ್ಲಿ ತಿಳಿಸಿದ್ದಾನೆಂದು ಗ್ರಹಿಸದ ಜ್ಞಾನಿಗಳು, ತಮ್ಮ ಸ್ವಂತ ಪ್ರಯತ್ನವಾಗಿ ಬಾಹ್ಯಯಜ್ಞವನ್ನು ತಯಾರು ಮಾಡಿದ್ದಾರೆ. ಆದರೇ ಬಾಹ್ಯಯಜ್ಞ ಪೂರ್ತಿ ಮಾನವ ಪ್ರಯತ್ನವೇ ಆಗಿರುವುದರಿಂದ, ಅದು ಅವರ ಭಾವದ ಪ್ರಕಾರ ಪ್ರಜೆಗಳಿಗೆ ಅರ್ಥವಾಗದೇ ಹೋಗಿ, ಈ ದಿನ ಪ್ರಪಂಚದಲ್ಲಿ ಅಧರ್ಮವಾಗಿ ತಯಾರಾಗಿದೆ. ದೇವರು ಜ್ಞಾನಯಜ್ಞಕ್ಕೆ ಹೋಲಿಕೆಯಾಗಿ ದ್ರವ್ಯಯಜ್ಞವನ್ನು ಹೇಳಿದ್ದಾನೆ. ಆದರೇ ಆ ಹೋಲಿಕೆಯನ್ನು ಮನುಷ್ಯ ಗ್ರಹಿಸದೆ, ತಾನೇ ಸ್ವತಃ ಜ್ಞಾನಯಜ್ಞಕ್ಕೆ ಹೋಲಿಕೆಯಾಗಿ ಬಾಹ್ಯಯಜ್ಞವನ್ನು ತಯಾರು ಮಾಡಿದ್ದಾನೆ.

ದೇವರು ಹೇಳಿದ ದ್ರವ್ಯಯಜ್ಞ ಹೋಲಿಕೆ, ಮನುಷ್ಯ ಹೇಳಿದ ಬಾಹ್ಯಯಜ್ಞ ಹೋಲಿಕೆ ಎರಡೂ ಒಂದೇ ವಿಧಾನವನ್ನು ತಿಳಿಸುತ್ತಾ, ಒಂದೇ ವಿಧ ಹೋಲಿಕೆಯಾಗಿ ಇದ್ದರೂ, ದ್ರವ್ಯಯಜ್ಞವನ್ನು ಮನುಷ್ಯ ಗುರ್ತಿಸಲಿಲ್ಲ. ಮನುಷ್ಯ ಬಾಹ್ಯ ಯಜ್ಞವನ್ನು ಗುರುತಿಸಿದರೂ, ಅದನ್ನು ಜ್ಞಾನಯಜ್ಞ ಹೋಲಿಕೆಯಾಗಿ ಗ್ರಹಿಸಲಿಲ್ಲ.

ಇದೆಲ್ಲವನ್ನೂ ಚೆನ್ನಾಗಿ ಯೋಚಿಸುವ ಬುದ್ಧಿಯಿಂದ ನೋಡುವುದಾದರೆ, ಅಸಲಾದ ಜ್ಞಾನಯಜ್ಞ ಒಂದೇ ಆದರೇ, ಅದಕ್ಕೆ ದೇವರು ಹೇಳಿದ ನಮೂನೆ ಒಂದು, ಮನುಷ್ಯ ಹೇಳಿದ ನಮೂನೆ ಒಂದು ಇದೆ. ಅಸಲಾದ ಜ್ಞಾನಯಜ್ಞವನ್ನು ಬದಿಗಿಟ್ಟು ದೇವರು ಮತ್ತು ಮನುಷ್ಯ ಹೇಳಿದ ಹೋಲಿಕೆಗಳನ್ನು ವಿವರವಾಗಿ ನೋಡೋಣ. ದೇವರು ಹೇಳಿದ ದ್ರವ್ಯಯಜ್ಞದ ಹೆಸರು ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ 33ನೇ ಶ್ಲೋಕದಲ್ಲಿ ಹೇಳಲಾಗಿದೆ.

***ಶ್ಲೋ॥ : ಶ್ರೇಯಾನ್ ದ್ರವ್ಯಮಯಾ ದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ! ***
***ಸರ್ವಂ ಕರ್ಮಾಖಿಲಂ ಪಾರ್ಥ! ಜ್ಞಾನೇ ಪರಿಸಮಾಪ್ಯತೇ***

ಈ ಶ್ಲೋಕದಲ್ಲಿ ದ್ರವ್ಯಯಜ್ಞ ಮತ್ತು ಜ್ಞಾನಯಜ್ಞ ಅನ್ನುವ ಎರಡು ಹೆಸರುಗಳು ಬಂದಿವೆ. ದ್ರವ್ಯಯಜ್ಞಕ್ಕಿಂತಲೂ ಜ್ಞಾನಯಜ್ಞ ಶ್ರೇಷ್ಟವಾದದ್ದೆಂದು ಸಹಾ ಈ ಶ್ಲೋಕದಲ್ಲಿ ಹೇಳಲಾಗಿದೆ. ಇಲ್ಲಿ ಎರಡು ಯಜ್ಞಗಳ ಹೆಸರುಗಳನ್ನು ಹೇಳಿ ಅದರಲ್ಲಿ ಒಂದು ಶ್ರೇಷ್ಟವಾದದ್ದೆಂದು ದೇವರು ಏಕೆ ಹೇಳಿದ್ದಾನೆ. ಶರೀರದಲ್ಲಿ ಯಜ್ಞಗಳಿವೆಯೆಂದಾಗಲಿ, ಅವುಗಳಿಗೆ ಹೆಸರುಗಳಿವೆಯೆಂದಾಗಲಿ, ಮನುಷ್ಯನಿಗೆ ಯಾವ ಮಾತ್ರ ತಿಳಿಯದೆ ಇರುವಾಗ ಎರಡು ಯಜ್ಞಗಳ ಹೆಸರುಗಳನ್ನು ಹೇಳಿ, ಅದರಲ್ಲಿ ಒಂದು ದೊಡ್ಡದೆಂದು ಹೇಳುವುದರಲ್ಲಿರುವ ರಹಸ್ಯವೇನಿದೆ? ಹಾಗೆ ಎರಡು ಹೆಸರುಗಳನ್ನು ಹೇಳದೆ ಒಂದೇ ಜ್ಞಾನಯಜ್ಞದ ಹೆಸರನ್ನು ದೇವರು ಹೇಳಿರಬಹುದಲ್ಲವೆ! ಇಂತದ್ದೇ ಇದೆ ಎಂದು ತಿಳಿಯದಿರುವಾಗ, ಅದಕ್ಕೆ ನಮೂನೆಯಾಗಿ ದ್ರವ್ಯಯಜ್ಞವನ್ನು ಕುರಿತು ಹೇಳಬೇಕಾದ ಅಗತ್ಯವೇನು

ಬಂದಿದೆಯೆಂದು ಪ್ರಶ್ನಿಸಿಕೊಂಡು ನೋಡಿದರೆ ಈ ವಿಧವಾಗಿ ಅರ್ಥವಾಗುತ್ತದೆ. ಒಂದೇ ಹೋಲಿಕೆಗಳಿರುವ ಇಬ್ಬರು ಅವಳಿಜವಳಿ ಮಕ್ಕಳಿದ್ದಾಗ, ಅವರಲ್ಲಿ ಯಾರು ದೊಡ್ಡವರೆಂದು ಗುರುತಿಸುವುದಕ್ಕೆ ಸಾಧ್ಯವಿಲ್ಲದಂತಿರುತ್ತದೆ. ಒಂದೇ ಹೋಲಿಕೆ ಇರುವ ಎರಡು ವಜ್ರಗಳಿರುವಾಗ ಯಾವುದು ನಕಲಿ, ಯಾವುದು ಅಸಲು ಎಂದು ಹೇಳುವುದಕ್ಕೆ ಆಗುವುದಿಲ್ಲ. ಹೀಗೆ ಎಲ್ಲಾದರೂ ಎರಡು ವಸ್ತುಗಳು ಒಂದೇ ವಿಧವಾಗಿ ಇರುವಾಗ, ಯಾವುದು ದೊಡ್ಡದೆಂದಾಗಲಿ, ಅಥವಾ ಯಾವುದು ಉನ್ನತವಾದದ್ದೆಂದಾಗಲಿ, ಯಾವುದು ಶ್ರೇಷ್ಠವಾದದ್ದೆಂದಾಗಲಿ ತಿಳಿಯುವುದಕ್ಕೆ ಎಲ್ಲರಿಗೂ ಆಗುವುದಿಲ್ಲ. ಅದರೇ ಎರಡು ವಸ್ತುಗಳನ್ನು ತಯಾರು ಮಾಡಿದವನಿಗೆ ಮಾತ್ರ ಅವುಗಳಲ್ಲಿ ವ್ಯತ್ಯಾಸ ತಿಳಿದಿರುತ್ತದೆ. ಎರಡು ವಸ್ತುಗಳನ್ನು ಸೃಷ್ಠಿಸಿದವನು ಅವುಗಳಲ್ಲಿ ಯಾವುದು ದೊಡ್ಡದೋ, ಯಾವುದು ದೊಡ್ಡದಲ್ಲವೋ ತಿಳಿದಿರುತ್ತದೆ. ಈಗ ದೇವರು ಎರಡು ಯಜ್ಞಗಳ ಪ್ರಸ್ತಾವನೆ ಏಕೆ ತಂದಿದ್ದಾನೋ, ಚೆನ್ನಾಗಿ ಅರ್ಥವಾಗಬೇಕೆಂದರೆ ಒಂದು ಸಣ್ಣ ಉದಾಹರಣೆಯನ್ನು ಹೇಳಿ ಕೊಳ್ಳೋಣ.

ಒಂದು ಕುಗ್ರಾಮದಲ್ಲಿ ಅಕ್ಕಸಾಲಿಗ (ಬಂಗಾರದ ಆಭರಣಗಳನ್ನು ಮಾಡುವ ಆಚಾರಿ) ಪ್ರಪಂಚದಲ್ಲಿ ಯಾರು ತಯಾರುಮಾಡದ ಮತ್ತು ಮಾಡಲಾರದ ಬಂಗಾರದಹಾರವನ್ನು ತಯಾರು ಮಾಡಿದ್ದಾನೆ. ಆ ಬಂಗಾರದಹಾರದೊಳಗೆ ನವರತ್ನಗಳನ್ನು ಜೋಡಿಸಿದ್ದಾನೆ. ಒಂಬತ್ತು ರತ್ನಗಳನ್ನು ಜೋಡಿಸುವಾಗ ಒಂದು ಕಡೆ ಜ್ಯೋತಿಷ್ಯ ಶಾಸ್ತ್ರವನ್ನೂ, ಮತ್ತೊಂದುಕಡೆ ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ಒಂಬತ್ತು ರತ್ನಗಳನ್ನು ಬಂಗಾರದಹಾರದೊಳಗೆ ಜೋಡಿಸಿದ್ದಾನೆ. ಎರಡು ಶಾಸ್ತ್ರಗಳ ಸೇರುವಿಕೆಯಿಂದ ನವರತ್ನಗಳನ್ನು ಹಾರದಲ್ಲಿ ಜೋಡಿಸುವುದರಿಂದ ಹಾರಕ್ಕೆ ಒಂದು ಶಕ್ತಿ ತಯಾರಾಗಿದೆ. ಜ್ಯೋತಿಷ್ಯಶಾಸ್ತ್ರದ ಆಧಾರದಿಂದ ಕರ್ಮಗಳೆನ್ನುವ ಕಟ್ಟಿಗೆಗಳನ್ನೂ, ಬ್ರಹ್ಮವಿದ್ಯಾ ಶಾಸ್ತ್ರದಿಂದ ಕರ್ಮವನ್ನು ನಾಶ ಮಾಡುವ ಜ್ಞಾನಾಗ್ನಿಯನ್ನು, ಹಾರದೊಳಗೆ ಬರುವಹಾಗೆ

ಮಾಡಿರುವುದರಿಂದ ಆ ಹಾರ ಪ್ರತ್ಯೇಕವಾದ ಹಾರವಾಗಿದೆ. ಅಕ್ಕಸಾಲಿಗ ಎಷ್ಟೋ ನೈಪುಣ್ಯತೆಯಿಂದ ಹಾರವನ್ನು ಮಾಡಿದರೆ, ಅದನ್ನು ಧರಿಸಿದವರಿಗೆ ಅವರಲ್ಲಿನ ರೋಗಗಳು ಇಲ್ಲದೇ ಹೋಗಿ ಆರೋಗ್ಯ ಸಮಕೂರುವ ಶಕ್ತಿ ಬಂದಿದೆ. ಹಾರದಲ್ಲಿ ಶಕ್ತಿ ಇದೆಯೆಂದು ಹಾರವನ್ನು ತಯಾರು ಮಾಡಿದ ಅಕ್ಕಸಾಲಿಗನಿಗೆ ತಿಳಿದಿದೆ. ತಯಾರು ಮಾಡಿದ ಅಕ್ಕಸಾಲಿಗ ಅದನ್ನು ಎಲ್ಲೋ ಒಂದು ಕಡೆ, ಯಾರಿಗೋ ಒಬ್ಬರಿಗೆ ಮಾರಬೇಕೆಂದುಕೊಂಡಿದ್ದಾನೆ. ಅದನ್ನು ಕೊಳ್ಳುವವನು ರೋಗಗಳ ಬಾಧೆಯಿಂದ ಹೊರಬೀಳುವನೆಂದು ತಿಳಿದ ಅಕ್ಕಸಾಲಿಗ, ಆ ವಿಷಯವನ್ನು ಹೊರಗೆ ಜನರೆಲ್ಲರಿಗೂ ತಿಳಿಸಿದ್ದಾನೆ. ಆದರೇ ಹಾರಕ್ಕೆ ಒಂದು ನಿಯಮವಿದೆ. ಆ ನಿಯಮದ ಪ್ರಕಾರ ಹಾರ ಆಚಾರಿ ಮನೆಯಲ್ಲಾದರೂ ಇರಬೇಕು, ಇಲ್ಲದೇ ಹೋದರೇ ಕೊಂಡವನ ಮೈಮೇಲಾದರೂ ಇರಬೇಕು. ಹಾಗಲ್ಲದೇ ಅದನ್ನು ಎಲ್ಲಾ ಊರುಗಳಲ್ಲಿ ಪ್ರದರ್ಶಿಸಬಾರದು. ಎಲ್ಲರ ಕೈಗಳು ತಾಕಬಾರದು. ಅಂತಹ ನಿಯಮ ಇರುವುದರಿಂದ ಅದನ್ನು ತಯಾರಿಸಿದ ಅಕ್ಕಸಾಲಿಗ ಅದನ್ನು ಇತರರಿಗೆ ತೋರಿಸಿ ಮಾರಬೇಕೆಂದರೆ ನೋಡುವವರು ಮುಟ್ಟಿಕೊಳ್ಳಬಾರದು. ಅಷ್ಟೇ ಅಲ್ಲದೇ ಬೇರೆ ಊರುಗಳಿಗೆ ಹೋಗಿ ಜನರಿಗೆ ತೋರಿಸಿ ಮಾರಬೇಕೆಂದರೆ ಅದನ್ನು ಮನೆಯಲ್ಲೇ ಇಡಬೇಕು, ಹೊರಗಿನ ಪ್ರದೇಶಗಳಿಗೆ ತೆಗೆದುಕೊಂಡು ಹೋಗಬಾರದು. ಆದ್ದರಿಂದ ಅಕ್ಕಸಾಲಿಗ ಒಂದು ಉಪಾಯವನ್ನು ಹುಡುಕಿ ಅದೇ ಆಕಾರವಿರುವ ಮತ್ತೊಂದು ನಕಲಿ ಹಾರವನ್ನು ತಯಾರು ಮಾಡಿದ್ದಾನೆ. ಮೊದಲನೆ ಹಾರದ ಹಾಗೆ ನಕಲಿ ನವರತ್ನಗಳನ್ನು ಇಟ್ಟಿದ್ದಾನೆ. ಒಟ್ನಲ್ಲಿ ನಕಲಿ ಹಾರ ಬಂಗಾರದ್ದಲ್ಲದಿದ್ದರೂ, ಅದರ ರತ್ನಗಳು ಅಸಲಾದವಲ್ಲದಿದ್ದರೂ ನೋಡುವುದಕ್ಕೆ ಮಾತ್ರ ಎಲ್ಲಾ ವಿಧಗಳ ಮೊದಲನೆಹಾರದ ಹಾಗೇ ಇದೆ. ನಕಲಿ ಹಾರಕ್ಕೆ ಶಕ್ತಿಯೂ ಇಲ್ಲ, ನಿಯಮಗಳೂ ಇಲ್ಲ. ಆದ್ದರಿಂದ ಅದನ್ನು ಯಾವ ಊರಿಗಾದರೂ ತೆಗೆದುಕೊಂಡು ಹೋಗಬಹುದು, ಯಾರಿಗಾದರೂ ತೋರಿಸಬಹುದು.

ಅಕ್ಕಸಾಲಿಗ ತಾನು ತಯಾರಿಸಿದ ಅಸಲಾದ ಮೊದಲನೆ ಹಾರವನ್ನು ಮನೆಯೊಳಗೆ ಭದ್ರವಾಗಿಟ್ಟು, ಮೊದಲ ಹಾರದಹಾಗೇ ಇರುವ ನಕಲಿ ಹಾರವನ್ನು ತೆಗೆದುಕೊಂಡು ಊರೂರು ತಿರುಗಿ, ಅದಕ್ಕೆ ಇರುವ ಪ್ರತ್ಯೇಕವಾದ ಶಕ್ತಿಯನ್ನು ಕುರಿತು ಹೇಳಿ ಪ್ರತ್ಯಕ್ಷವಾಗಿ ಹಾರವನ್ನು ತೋರಿಸುತ್ತಿದ್ದನು. ಅಕ್ಕಸಾಲಿಗ ಬಹಳ ದಿನಗಳು, ಬಹಳ ಊರುಗಳು ತಿರುಗಿ ತಾನು ತಯಾರಿಸಿದ ಹಾರವನ್ನು ಮಾರಬೇಕೆಂದು ಪ್ರಯತ್ನಿಸಿದರೂ, ಅದನ್ನು ಯಾರೂ ಕೊಳ್ಳಲಿಲ್ಲ. ಆಚಾರಿ (ಅಕ್ಕಸಾಲಿಗ) ಶ್ರಮ ಪಡುವುದನ್ನು ನೋಡಿದ ಕೆಲವರು ತಮಗೆ ಪರಿಚಯ ವಿರುವವರಿಗೆ ಆಚಾರಿ ಹಾರವನ್ನು ಕುರಿತು ಹೇಳಿ, ಅದನ್ನು ಯಾರಾದರೂ ಕೊಳ್ಳಿರೆಂದು ಹೇಳುತ್ತಿದ್ದರು. ಆದರೇ ಆಚಾರಿ ತನ್ನ ಹಾರವನ್ನು ಸ್ಥಾನಿಕ ಭಾಷೆಯಲ್ಲಿ ಹಾರ ಅನ್ನದೆ ದಂಡ (ಹಾರ) ಎಂದು ಹೇಳುತ್ತಿದ್ದನು. ಆಚಾರಿ ದಂಡವನ್ನು ಮಾರಬೇಕೆಂದು ಪ್ರಯತ್ನ ಮಾಡುತ್ತಿರುವ ಇತರರು, ದಂಡವನ್ನು ಕುರಿತು ಇತರರಿಗೆ ಹೇಳುವಾಗ ದಂಡ (ಹಾರ) ಎಂದು ಹೇಳದೇ ದಂಡವು ಎಂದು ಹೇಳುತ್ತಿದ್ದರು. ಅದರಿಂದ ಕೇಳುವವರೆಲ್ಲಾ ಆಚಾರಿ ಯೋಗ ದಂಡವನ್ನು ಮಾರುತ್ತಿದ್ದಾನೆಂದು ಅಂದುಕೊಂಡರು. ವಾಸ್ತವಕ್ಕೆ ಆಚಾರಿ ಮಾರಬೇಕೆಂದು ಕೊಂಡಿರುವುದು ದಂಡವಾದರೇ, ಕೊಳ್ಳಬೇಕೆಂದುಕೊಂಡವರು ಆಚಾರಿ ಮಾರುತ್ತಿರುವುದು ಯೋಗ ದಂಡವಾದ ಕಟ್ಟಿಗೆ ಎಂದು ತಿಳಿದಿದ್ದಾರೆ. ದಂಡವು ಎಂದರೆ ಕಟ್ಟಿಗೆ ಎಂದು ಅರ್ಥವಿರುವುದರಿಂದ, ಇತರರು ಹೇಳುವುದರಲ್ಲಿ ದಂಡವು ಎಂದು ಹೇಳುವುದರಿಂದ, ಅರ್ಥ ಅಪಾರ್ಥವಾಗಿಹೋಗಿದೆ. ಕೊನೆಗೆ ದಂಡ (ಹಾರ) ತಿಳಿಯದೇ ಹೋಗಿ ಕೆಲವರಿಗೆ ಯೋಗದಂಡವು ತಿಳಿದಿದೆ. ಕಂಸಾಲಿ ಹಾರವನ್ನು ಮಾಡಿ, ಅದನ್ನು ತಿಳಿಸುವುದಕ್ಕೆ ನಕಲೀ ಹಾರವನ್ನು ಮಾಡಿರುವಾಗ, ಅದನ್ನು ಪ್ರಚಾರ ಮಾಡುವವರು ದಂಡ (ಹಾರ)ಕ್ಕೆ ಬದಲಾಗಿ ದಂಡವನ್ನು ಪ್ರಚಾರಮಾಡಿದ್ದಾರೆ. ಅಸಲಾದ ಹಾರವನ್ನು ಕೆಲವರಿಗೆ ತೋರಿಸುವುದಕ್ಕೆ ಆಚಾರಿ ನಕಲೀ ಹಾರವನ್ನು ಮಾಡಿರುವಾಗ, ಇತರರು ಅದನ್ನು ಮಾತುಗಳಲ್ಲಿ ಹೇಳುತ್ತಾ ದಂಡವನ್ನು ಯೋಗದಂಡ (ಕಟ್ಟಿಗೆ) ಮಾಡಿದ್ದಾರೆ. ಅದರಿಂದ ಹಾರ ತಿಳಿಯದಂತೆ ಹೋಗಿದೆ.

ಆಚಾರಿ ಮಹಿಮೆ ಇರುವ ಹಾರವನ್ನು ಮಾಡಿ ಅದನ್ನು ಇತರರಿಗೆ ತೋರಿಸುವುದಕ್ಕೆ ನಕಲಿ ಹಾರವನ್ನು ಮಾಡಿರುವಾಗ, ಇತರರು ಅದೇ ಹಾರವನ್ನು ಕುರಿತು ದಂಡವು ಎಂದು ಹೇಳಿದ್ದಾರೆ. ಈ ವಿಧವಾಗಿ ಒಂದೇ ಹಾರ ನಕಲಿ ಹಾರದಂತೆ ಬದಲಾಗಿ, ನಂತರ ದಂಡವಾಗಿ ಹೇಳಲಾಗುತ್ತಿದೆ. ಇದೆಲ್ಲಾ ಹೇಗಿದೆಯೆಂದರೆ! ಅಕ್ಕಸಾಲಿಗ ರೋಗವನ್ನು ಹೋಗುವಹಾಗೆ ಮಾಡುವ ಮಹಿಮೆ ಇರುವ ಹಾರವನ್ನು ತಯಾರು ಮಾಡಿದಹಾಗೆ, ದೇವರು ಕರ್ಮಗಳನ್ನು ನಿರ್ಮೂಲಿಸುವ ಜ್ಞಾನಯಜ್ಞವನ್ನು ಶರೀರದಲ್ಲೇ ನಿರ್ಮಿಸಿದ್ದಾನೆ. ಅಕ್ಕಸಾಲಿಗ ತನ್ನ ಶಕ್ತಿ ಇರುವ ಹಾರವನ್ನು ಹೊರಗೆ ತೆಗೆಯದೆ, ಅದನ್ನು ಇತರರಿಗೆ ತೋರಿಸಿ ತಿಳಿಯುವಹಾಗೆ ಮಾಡುವುದಕ್ಕೆ, ನಕಲಿ ಹಾರವನ್ನು ತಯಾರು ಮಾಡಿದಹಾಗೆ, ದೇವರೂ ಕೂಡ ಜ್ಞಾನಯಜ್ಞವೆನ್ನುವುದನ್ನು ಇತರರಿಗೆ ಅರ್ಥವಾಗುವಹಾಗೆ ಮಾಡುವುದಕ್ಕೆ, ದ್ರವ್ಯಯಜ್ಞವೆನ್ನುವ ನಕಲಿ ಯಜ್ಞವನ್ನು ಸಹಾ ಶರೀರದಲ್ಲೇ ತಯಾರಿಸಿ ಇಟ್ಟಿದ್ದಾನೆ. ದ್ರವ್ಯಯಜ್ಞವನ್ನು ತಿಳಿಯುವುದಾದರೆ, ಕರ್ಮವನ್ನು ಇಲ್ಲದೇ ಮಾಡುವ ಜ್ಞಾನಯಜ್ಞ ಸುಲಭವಾಗಿ ತಿಳಿಯುವುದೆನ್ನುವ ಉದ್ದೇಶದಿಂದ, ಕಂಸಾಲಿ ನಕಲಿ ದಂಡವನ್ನು ತಯಾರಿಸಿದ ಹಾಗೆ, ದೇವರು ಜ್ಞಾನಯಜ್ಞವನ್ನು ತಿಳಿಸುವ ನಿಮಿತ್ತ ದ್ರವ್ಯಯಜ್ಞವನ್ನು ತಯಾರಿಸಿದ್ದಾನೆ. ಅಕ್ಕಸಾಲಿಗ ತಯಾರಿಸಿದ ನಕಲಿ ದಂಡವನ್ನು ಪ್ರಚಾರ ಮಾಡುವುದಕ್ಕೋಸ್ಕರ ಇತರರು ಪ್ರಯತ್ನಿಸಿ ದಂಡವನ್ನು ಯೋಗದಂಡವಾಗಿ ಹೇಳಿದಹಾಗೆ, ದೇವರು ಹೇಳಿದ ಯಜ್ಞವನ್ನು ಪ್ರಚಾರ ಮಾಡುವುದಕ್ಕೆ ಮನುಷ್ಯ ಪ್ರಯತ್ನಿಸಿ ಬಾಹ್ಯಯಜ್ಞವನ್ನು ತಯಾರಿಸಿದ್ದಾನೆ. ಆಚಾರಿ ಮಾಡಿ ಮಾರಬೇಕೆಂದುಕೊಂಡ ಹಾರ ಕೊನೆಗೆ ಇತರರ ಜೋಕ್ಯದಿಂದ ಹಾರ ಹೋಗಿ ಕೊನೆಗೆ ದಂಡ ಆದಹಾಗೆ, ದೇವರು ಸೃಷ್ಟಿಸಿದ ಜ್ಞಾನಯಜ್ಞ, ಜ್ಞಾನಿಗಳ ಬೋಧನೆಗಳಿಂದ ಬದಲಾಗಿ ಕೊನೆಗೆ ಬಾಹ್ಯಯಜ್ಞವಾಗಿ ತಯಾರಾಗಿದೆ. ಆಚಾರಿ ಶಕ್ತಿ ಇರುವ ಹಾರವನ್ನು ತಯಾರು ಮಾಡಿ ಅದನ್ನು ತೋರಿಸುವುದಕ್ಕೆ, ಅದಕ್ಕೆ ಬದಲು ಅಂತಹದೇ ನಕಲಿ ಹಾರವನ್ನು ಮಾಡಿದರೂ, ಮಧ್ಯದಲ್ಲಿ ಮನುಷ್ಯರ ಜೋಕ್ಯದಿಂದ ಇತರರಿಗೆ ನಕಲಿ ಹಾರವೂ ಸಹ ತಿಳಿಯದೇ ಹೋಗಿ, ಮೊಳ

ಹಾರಕ್ಕೆ ಬದಲು ಯಾವ ಸಂಬಂಧವಿಲ್ಲದ ಮೊಳ ಕಟ್ಟಿಗೆಯಾಗಿ ತಿಳಿದುಬಂದಿದೆ. ಇದು ಬಹಳ ವಿಚಿತ್ರವಾಗಿ ಇದೆ ತಾನೆ! ಇದೇ ವಿಧವಾಗಿ ದೇವರು ಜ್ಞಾನಯೋಗವನ್ನು ತಿಳಿಸುವ ನಿಮಿತ್ತ ದ್ರವ್ಯಯಜ್ಞವೆನ್ನುವ ಹೆಸರನ್ನು ತನ್ನ ಶ್ಲೋಕದಲ್ಲಿ ಹೇಳಿದರೇ, ನಮ್ಮ ಬೋಧಕರೆಲ್ಲರೂ ದ್ರವ್ಯಯಜ್ಞವನ್ನು ಪೂರ್ತಿಯಾಗಿ ಬಿಟ್ಟು, ಕೊನೆಗೆ ದ್ರವ್ಯಗಳು ಖರ್ಚಾಗುವ ಬಾಹ್ಯಯಜ್ಞವನ್ನು ಎಲ್ಲರಿಗೂ ಅರ್ಥವಾಗುವಹಾಗೆ ಮಾಡಿದ್ದಾರೆ.

ಆಚಾರಿ ಹಾರವೊಂದರ ವ್ಯಾಪಾರ ಯಾರಿಗೂ ತಿಳಿಯದೇ ಹೋಗುವುದಲ್ಲದೇ, ಕೊನೆಗೆ ದೇಶವೆಲ್ಲಾ ಆಚಾರಿದು ಕಟ್ಟಿಗೆಗಳ ವ್ಯಾಪಾರವೆಂದು ಪ್ರಚಾರವಾಗಿದೆ. ಹಾಗೇ ದೇವರು ಜ್ಞಾನಯಜ್ಞವನ್ನು ತಿಳಿಸುವುದಕ್ಕೆ ನಮೂನೆಯಂತೆ ದ್ರವ್ಯಯಜ್ಞವನ್ನು ಹೇಳಿದರೇ, ಕೊನೆಗೆ ಅದು ದಂಡ, ದಂಡವು ಆದಹಾಗೆ, ದ್ರವ್ಯ ಯಜ್ಞ ಕೊನೆಗೆ ದ್ರವ್ಯಗಳೊಂದಿಗೆ ಮಾಡುವ ಬಾಹ್ಯಯಜ್ಞವಾಗಿದೆ. ಈದಿನ ಭೂಮಿಮೇಲೆ ಯಾರು ಮಾಡಿದರೂ, ಯಾವ ಹೆಸರನ್ನಿಟ್ಟು ಮಾಡಿದರೂ, ಎಲ್ಲಿ ಮಾಡಿದರೂ ದ್ರವ್ಯಗಳನ್ನು ಖರ್ಚು ಮಾಡುವ ಬಾಹ್ಯಯಜ್ಞಗಳನ್ನೇ ಮಾಡುತ್ತಿದ್ದಾರೆ. ತ್ರೇತಾಯುಗದಿಂದ ಬಾಹ್ಯಯಜ್ಞಗಳನ್ನು ಮಾಡುವುದಕ್ಕೆ ಪೂರ್ತಿಯಾಗಿ ಮನುಷ್ಯ ಅಭ್ಯಾಸವಾಗಿದ್ದಾನೆ. ದೇವರು ಹೇಳಿದ ಜ್ಞಾನವನ್ನಲ್ಲದೇ, ಆತನು ಹೇಳಿದ ಜ್ಞಾನಯಜ್ಞವನ್ನು ಪೂರ್ತಿಯಾಗಿ ಮರೆತುಹೋಗಿ, ಮನುಷ್ಯ ತನ್ನ ಸ್ವಂತ ಬುದ್ಧಿವಂತಿಕೆಯಿಂದ ಮಾಡುವ ಬಾಹ್ಯಯಜ್ಞಗಳನ್ನು ನೋಡಿದ ತ್ರಿಕಾಲಜ್ಞಾನಿ, ಬ್ರಹ್ಮಜ್ಞಾನಿ ಎಂದು ಹೆಸರುವಾಸಿಯಾದ ವ್ಯಕ್ತಿ, ಮನುಷ್ಯರು ಮಾಡುವ ಬಾಹ್ಯ ಯಜ್ಞಗಳನ್ನು ಪೂರ್ತಿ ವಿರೋಧಿಸಿದರೆ ಆತನನ್ನು ರಾಕ್ಷಸನೆಂದಿದ್ದಾರೆ. ದೇವರು ಹೇಳಿದ ಜ್ಞಾನಯಜ್ಞವನ್ನು ಬಿಟ್ಟು, ಅದಕ್ಕೆ ವಿರುದ್ಧವಾಗಿ ದ್ರವ್ಯಗಳನ್ನು ಖರ್ಚು ಮಾಡುವ ಬಾಹ್ಯಯಜ್ಞಗಳನ್ನು ಮಾಡಬೇಡೆಂದು ಹೇಳಿದವನು ರಾಕ್ಷಸನಾದರೇ, ಅಜ್ಞಾನದಿಂದ ಕೂಡಿಕೊಂಡು ಯಾವ ಜ್ಞಾನವಿಲ್ಲದಾಗಿ, ದೇವರ ಧರ್ಮವಲ್ಲದ ಬಾಹ್ಯಯಜ್ಞವನ್ನು ಮಾಡುವವರು ದೇವತೆಗಳಾಗುತ್ತಾರಾ? ನೀವೇ ಯೋಚಿಸಿರಿ. ದೇವರು ತನ್ನ

ಭಗವದ್ಗೀತೆಯಲ್ಲಿ ಮನುಷ್ಯನೊಂದರ ಕರ್ಮ ಹೋಗುವ ವಿಧಾನಗಳನ್ನು ಮೂರು ಯೋಗಗಳಾಗಿ ಹೇಳಿದರೆ, ದೇವರು ಹೇಳಿದ ಮೂರು ಯೋಗಗಳಲ್ಲಿ ಕರ್ಮ ಸುಟ್ಟುಹೋಗುವ ಕರ್ಮಯೋಗ ಒಂದು ಧರ್ಮವಾದಾಗ, ಬ್ರಹ್ಮಯೋಗ ಎರಡನೇ ಧರ್ಮವಾದಾಗ, ಭಕ್ತಿಯೋಗ ಮೂರನೇ ಧರ್ಮವಾಗಿ ಇದೆ. ಈ ಮೂರು ಯೋಗಗಳಲ್ಲಿ ಜೀವಿಯ ಕರ್ಮನಾಶ ಹೊರತು ಮತ್ತ್ಯಾವುದು ಇಲ್ಲ. ಜೀವಿಯ ಕರ್ಮ ನಾಶವಾಗುವ ಮೂರು ವಿಧಾನಗಳನ್ನು ಸೇರಿಸಿ ಜ್ಞಾನ ಯಜ್ಞವೆಂದು ಒಂದು ಹೆಸರಾಗಿ ಹೇಳಲಾಗಿದೆ. ಮೂವರು ವ್ಯಕ್ತಿಗಳು ಬಿಡಿಬಿಡಿಯಾಗಿ ಮೂರುಕಡೆ ಅಗ್ನಿಇಟ್ಟು ಕಟ್ಟಿಗೆಗಳನ್ನು ಸುಟ್ಟಿದ್ದಾರೆಂದುಕೊಳ್ಳಿ. ಆಗ ಮೂವರು ಮಾಡಿರುವುದು ಒಂದೇ ಕೆಲಸವಾಗುತ್ತದೆ. ಆದ್ದರಿಂದ ಆ ಮೂವರ ಕೆಲಸವನ್ನು ಒಂದೇ ಹೆಸರಿಂದ "ಕಟ್ಟಿಗೆಗಳ ದಹನ" ಎಂದು ಹೇಳಬಹುದು ತಾನೆ! ಹಾಗೇ ಮೂರು ಬೇರೆ ಬೇರೆ ಯೋಗಗಳಲ್ಲಿ ಕರ್ಮಗಳು ಸುಟ್ಟುಹೋಗುವುದನ್ನು ಗೀತೆಯಲ್ಲಿ ದೇವರು "ಜ್ಞಾನಯಜ್ಞ" ಎಂದು ಒಂದೇ ಹೆಸರಿಂದ ಹೇಳಲಾಗಿದೆ.

ಒಬ್ಬ ಮನುಷ್ಯ ಒಂದು ಯೋಗವನ್ನು ಆಚರಿಸಿದರೂ ಅಥವಾ ಎರಡು ಯೋಗಗಳನ್ನು ಆಚರಿಸಿದರೂ, ಅದನ್ನು ಜ್ಞಾನಯಜ್ಞ ಮಾಡುವುದೆಂದೇ ಹೇಳಬಹುದು. ಹಾಗೇ ಮೂರು ಯೋಗಗಳನ್ನು ಮಾಡಿದರೂ, ಒಂದು ಯೋಗವನ್ನು ಮಾಡಿದರೂ ಕರ್ಮನಶಿಸುವ ವಿಧಾನವನ್ನು ಜ್ಞಾನಯಜ್ಞವಾಗಿ ಭಗವದ್ಗೀತೆಯಲ್ಲಿ ಹೇಳಲಾಗಿದೆ. ಭಗವದ್ಗೀತೆಯಲ್ಲಿ ಮೂರು ಧರ್ಮಗಳಾದ ಮೂರು ಯೋಗಗಳಲ್ಲಿ, ಯಾವೊಂದು ಯೋಗದಿಂದ ಕರ್ಮಸುಟ್ಟುಹೋದರೂ, ಅದನ್ನು ಯಜ್ಞವೆಂದು ಪ್ರತ್ಯೇಕಿಸಿ ಜ್ಞಾನಯಜ್ಞವೆಂದು ಹೇಳಲಾಗಿದೆ. **ಅಗ್ನಿ ಇರುವಕಡೆ ಎಲ್ಲಾ ಸುಟ್ಟುಹೋಗುತ್ತದೆನ್ನುವ ಹಾಗೆ ಕರ್ಮ ಸುಟ್ಟುಹೋಗುವ ವಿಧಾನ ಎಲ್ಲಿದ್ದರೂ ಅಲ್ಲಿ ಜ್ಞಾನವೆನ್ನುವ ಅಗ್ನಿಯಿಂದ, ಕರ್ಮಗಳೆನ್ನುವ ಕಟ್ಟಿಗೆಗಳು ಸುಟ್ಟುಹೋಗುತ್ತವೆ. ಜ್ಞಾನ ಅಗ್ನಿಯಾಗಿ, ಕರ್ಮಗಳು ಕಟ್ಟಿಗೆಗಳಾದಾಗ ಅದನ್ನು ಜ್ಞಾನ ಯಜ್ಞ ಎಂದು ಅನ್ನಬಹುದು**. ಯೋಗ ಅನ್ನುವ ಕುಂಡದಲ್ಲಿ, ಜ್ಞಾನ

ಅನ್ನುವ ಅಗ್ನಿಯಲ್ಲಿ, ಕರ್ಮಗಳೆನ್ನುವ ಸಮಿಧೆಗಳು (ಪಾಪಪುಣ್ಯಗಳಾದ ಕಟ್ಟಿಗೆಗಳು) ಸುಟ್ಟು, ಇಲ್ಲದೇ ಹೋಗುವುದನ್ನು ಜ್ಞಾನಯಜ್ಞ ಎಂದು ದೇವರು ಹೇಳಿದಹಾಗೆ ಅರ್ಥವಾಗಿದೆ. ಈ ವಿಷಯವನ್ನು ಭಗವದ್ಗೀತೆಯಲ್ಲಿ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ 37ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ.

*ಶ್ಲೋ॥ :- ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರುತೇರ್ಜುನ।*
*ಜ್ಞಾನಾಗ್ನಿ ಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ॥*

**ಭಾವಾರ್ಥ** :-ಯಾವ ವಿಧವಾಗಿ ಅಗ್ನಿಯಲ್ಲಿ ಕಟ್ಟಿಗೆಗಳು ಸುಟ್ಟುಹೋಗುತ್ತಿವೆಯೋ, ಅದೇ ವಿಧವಾಗಿ ಜ್ಞಾನವೆನ್ನುವ ಅಗ್ನಿಯಲ್ಲಿ ಸರ್ವ ಕರ್ಮಗಳು ಸುಟ್ಟು ಬೂದಿಯಾಗುತ್ತವೆ. ಈ ಶ್ಲೋಕದಲ್ಲಿನ ಭಾವವನ್ನು ನೋಡಿದರೆ ಇದು ಪೂರ್ತಿ ಜ್ಞಾನಯಜ್ಞಕ್ಕೆ ಸಂಬಂಧಿಸಿದ ವಿಷಯವೆಂದು ತಿಳಿದುಹೋಗುತ್ತದೆ. ಇದೇ ಅಧ್ಯಾಯದಲ್ಲಿ 33ನೇ ಶ್ಲೋಕದಲ್ಲಿ ದ್ರವ್ಯಯಜ್ಞಕ್ಕಿಂತಲೂ ಜ್ಞಾನಯಜ್ಞ ಶ್ರೇಷ್ಠವಾದದ್ದೆಂದು ಹೇಳಲಾಗಿದೆ. ಈ ಎರಡೂ ಯಜ್ಞಗಳಿಗೆ ದೇವರೇ ಹೆಸರು ಇಟ್ಟಿದ್ದಾನೆ. ಈ ಎರಡು ಯಜ್ಞಗಳು ದೇಹದಲ್ಲೇ ನಡೆಯುತ್ತವೆ. ಈ ಎರಡು ಯಜ್ಞಗಳಿಗೆ ಅಧಿಪತಿ ಶರೀರಕ್ಕೆ ಅಧಿಪತಿಯಾದ ಆತ್ಮನೇ. ಇದೇ ವಿಷಯವನ್ನು ಭಗವದ್ಗೀತೆಯಲ್ಲಿ ಅಕ್ಷರಪರಬ್ರಹ್ಮಯೋಗವೆನ್ನುವ ಅಧ್ಯಾಯದಲ್ಲಿ ಇರುವ 4ನೇ ಶ್ಲೋಕದಲ್ಲಿ ಇದೆ.

*ಶ್ಲೋ॥ ಅಧಿಭೂತಂ ಕ್ಷರೋಭಾವಃ ಪುರುಷಶ್ಚಾಧಿದೈವತಮ್ ।*
*ಅಧಿ ಯಜ್ಞೋಹಮೇವಾತ್ರ ದೇಹೇದೇಹ ಭೃತಾಂವರ ॥*

ಈ ಶ್ಲೋಕದಲ್ಲಿ ಶರೀರಕ್ಕೆ ಅಧಿಪತಿಯಾಗಿರುವ ಆತ್ಮನಾದ ನಾನು ಶರೀರದಲ್ಲಿ ನಡೆಯುವ ಯಜ್ಞಗಳಿಗೆ ಅಧಿಪತಿಯಾಗಿ ಇದ್ದೇನೆಂದು ಹೇಳಿದ್ದಾನೆ. ಇದನ್ನನುಸರಿಸಿ ನೋಡಿದರೆ ಯಜ್ಞಗಳಿಗೆ ಅಧಿಪತಿ ಆತ್ಮಯೆಂದೂ, ಯಜ್ಞಗಳು ಶರೀರದಲ್ಲೇ ನಡೆಯುತ್ತಿವೆಯೆಂದು ತಿಳಿಯುತ್ತದೆ. ಶರೀರದಲ್ಲಿ ನಡೆಯುವ ಪ್ರತಿ ಕಾರ್ಯ ಜೀವಿಯಿಂದಲೇ ನಡೆಯುತ್ತಿಲ್ಲ. ಶರೀರದಲ್ಲಿ ನಡೆಯುವ ಹೊರಗಿನ

ಇಂದ್ರಿಯಗಳ ಕೆಲಸವಾಗಲಿ, ಒಳಗಿನ ಇಂದ್ರಿಯಗಳ ಕೆಲಸವಾಗಲಿ, ಶರೀರಕ್ಕೆ ಅಧಿಪತಿ ಯಾಗಿರುವ ಆತ್ಮವೇ ಮಾಡುತ್ತದೆ. ಮುಖ್ಯವಾಗಿ ಜೀವಿಯು ಏನೂ ಮಾಡುತ್ತಿಲ್ಲವೆಂದು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ದ್ರವ್ಯಯಜ್ಞವಾಗಲೀ, ಜ್ಞಾನಯಜ್ಞವಾಗಲೀ ಶರೀರದಲ್ಲಿ ನಡೆಯುತ್ತವೆ. ಅದರೇ ದ್ರವ್ಯಗಳನ್ನು ಅಗ್ನಿಯಲ್ಲಿ ಸುಡುವ ಬಾಹ್ಯ ಯಜ್ಞಗಳು ಮಾತ್ರ ಶರೀರದ ಹೊರಗೆ ನಡೆಯುತ್ತಿವೆ. ದೇವರು ಹೇಳಿದ ಎರಡು ಯಜ್ಞಗ್ಗಳಲ್ಲಿ ದ್ರವ್ಯಯಜ್ಞ ಶರೀರದಲ್ಲಿ ಉದರಭಾಗದಲ್ಲಿನ ಜೀರ್ಣಾಶಯದಲ್ಲಿ ನಡೆಯುತ್ತದೆ. ಜ್ಞಾನಯಜ್ಞ ತಲೆ ಭಾಗದಲ್ಲಿರುವ ಗುಣಚಕ್ರದಲ್ಲಿ ನಡೆಯುತ್ತಿದೆ.

ಶಕ್ತಿಯಿರುವಂತದ್ದು ಪ್ರಪಂಚವೆಲ್ಲದಕ್ಕೂ ಒಂದೇ ಒಂದು ಯಜ್ಞವಿದೆ. ಯಾವ ವಿಧವಾಗಿ ಆಚಾರಿ ಹತ್ತಿರ ಶಕ್ತಿಯಿರುವ ಹಾರ ಒಂದೇ ಇದೆಯೋ, ಅದೇ ವಿಧವಾಗಿ ಜ್ಞಾನಶಕ್ತಿ ಇರುವ ಯಜ್ಞವೂ ಸಹ ಒಂದೇ ಇದೆ. ಅದೇ ಜ್ಞಾನಯಜ್ಞ, ಆಚಾರಿ (ಅಕ್ಕಸಾಲಿ) ಹತ್ತಿರ ಮತ್ತೊಂದು ನಕಲಿ ಹಾರವಿದ್ದಹಾಗೆ, ದೇವರು ಹೇಳಿರುವುದು, ಮಾಡಿರುವುದು ಮತ್ತೊಂದು ದ್ರವ್ಯಯಜ್ಞವಿದೆ. ಜ್ಞಾನಯಜ್ಞಕ್ಕೆ ನಕಲಿ ಯಜ್ಞವಾಗಿ ದ್ರವ್ಯಯಜ್ಞವಿದೆಯೆಂದು ಹೇಳಬಹುದು. ಪ್ರಪಂಚದಲ್ಲಿರುವವು ಎರಡೇ ಎರಡು ಯಜ್ಞಗ್ಗಳಾದರೇ ಅದರಲ್ಲಿ ಒಂದು ಅಸಲಾದದ್ದು, ಎರಡನೆಯದು ನಕಲೀದು. ಪ್ರಪಂಚವೆಲ್ಲದಕ್ಕೂ ಇರುವ ಏಕೈಕ ಅಸಲಾದ ಯಜ್ಞ ಜ್ಞಾನಯಜ್ಞವಿದೆ. ದೇಹದಲ್ಲಿರುವ ಅಸಲಿ, ನಕಲಿ ಎರಡು ಯಜ್ಞಗ್ಗಳಲ್ಲಿ ನಕಲಿ ಯಜ್ಞವಾದ ದ್ರವ್ಯಯಜ್ಞವನ್ನು ಆತ್ಮವೇ ಮಾಡುತ್ತದೆ. ಅಸಲಾದ ಜ್ಞಾನಯಜ್ಞವನ್ನು ಶರೀರದಲ್ಲಿನ ಜೀವಿಯು ಮಾಡಬೇಕಾಗಿರುವಾಗ, ಜೀವಿಯು ಮಾಡುತ್ತಿಲ್ಲ. ಪ್ರಪಂಚವೆಲ್ಲದಕ್ಕೂ ಇರುವ ಒಂದೇ ಒಂದು ಯಜ್ಞವನ್ನು ಜೀವಿಯು ಮಾಡುವುದಕ್ಕೆ ನಿರ್ಮಿಸಿದಾಗ, ಜೀವಿಯು ಮಾಡುತ್ತಿಲ್ಲ. ಶರೀರದಲ್ಲಿ ತಲೆಯಲ್ಲಿರುವ ಜ್ಞಾನಯಜ್ಞದ ಹತ್ತಿರ ಯಜ್ಞದಲ್ಲಿ ಹಾಕಬೇಕಾದ ಸಮಿಧೆಗಳು ಬೆಟ್ಟದಂತೆ ಬೆಳೆದುಹೋಗಿವೆ. ಆದರೇ ಜ್ಞಾನಯಜ್ಞವನ್ನು ಮಾಡಬೇಕಾದ ಋತ್ವಿಕನಾದ ಜೀವಿಯು ಯಜ್ಞದ ಧ್ಯಾಸದೊಳಗೆ ಹೋಗದೆ ನಿದ್ರಿಸುತ್ತಿರುವಾಗ,

ಯಜ್ಞಕುಂಡದಲ್ಲಿ ಅಗ್ನಿ ಎಷ್ಟು ಮಾತ್ರವೂ ಇಲ್ಲ. ಋತ್ವಿಕನಾದ ಜೀವಿಯು ಯೋಗವನ್ನು ಆಚರಿಸಿ, ಜ್ಞಾನವೆನ್ನುವ ಅಗ್ನಿಯನ್ನು ಪ್ರಜ್ವಲಿಸಿ, ಕರ್ಮಗಳೆನ್ನುವ ಕಟ್ಟಿಗೆಗಳನ್ನು ಸುಡಬೇಕಾಗಿರುವಾಗ, ಕುಂಡದಲ್ಲಿ ಅಗ್ನಿ ಇಲ್ಲ, ಋತ್ವಿಕನು ಗೊರಕೆಹೊಡೆದು ನಿದ್ರೆ ಮಾಡುತ್ತಿದ್ದಾನೆ. ಪ್ರಪಂಚವೆಲ್ಲದಕ್ಕೂ ಒಂದೇ ಒಂದು ಯಜ್ಞವಾಗಿರುವ ಜ್ಞಾನಯಜ್ಞ, ಈ ವಿಧವಾಗಿ ಮಾಡುವವರಿಲ್ಲದೇ ನಂದಿಹೋಗಿದೆ.

ಹೊರಗಿನ ಪ್ರಜೆಗಳು ತಿಳಿದುಕೊಳ್ಳುವಹಾಗೆ ದ್ರವ್ಯಯಜ್ಞವನ್ನು ದೇವರೇ ತಯಾರು ಮಾಡಿದ್ದಾನೆ. ಆದ್ದರಿಂದ ದ್ರವ್ಯಯಜ್ಞವನ್ನು ನೋಡಿಯಾದರೂ ಜ್ಞಾನಯಜ್ಞವನ್ನು ಮಾಡಬಲ್ಲರೆನ್ನುವ ಭಾವದಿಂದ, ಆತ್ಮ ಪ್ರತಿ ದಿನವೂ ದ್ರವ್ಯಯಜ್ಞವನ್ನು ಮಾಡುತ್ತದೆ. ಶರೀರದಲ್ಲಿ ಜೀರ್ಣಾಶಯದಲ್ಲಿ ಆತ್ಮ ಅಧಿಪತಿಯಾಗಿ ಇದ್ದು, ಆತ್ಮೇ ಮಾಡುವ ದ್ರವ್ಯಯಜ್ಞವನ್ನು ಮನುಷ್ಯರು ಯಾರೂ ಗಮನಿಸಲಿಲ್ಲ. ದ್ರವ್ಯಯಜ್ಞ ಸರ್ವಸಾಧಾರಣವಾಗಿ ನಡೆಯುವ ಕೆಲಸವೆಂದು ಅದನ್ನು ಕೇವಲವಾಗಿ ಭಾವಿಸಿದ್ದಾರೆ. ಪ್ರತಿ ದಿನವೂ ನಡೆಯುವ ದ್ರವ್ಯಯಜ್ಞ ತಾವು ಮಾಡದಿದ್ದರೂ, ಶರೀರದಲ್ಲಿ ಯಾರು ಮಾಡುತ್ತಿದ್ದಾರೋ ಮನುಷ್ಯ ಮಾತ್ರ ಯೋಚಿಸುತ್ತಿಲ್ಲ. ಮನುಷ್ಯ ಹುಟ್ಟಿದಾಗಿನಿಂದ, ತನ್ನ ಶರೀರದ ಮೇಲೆ ತನಗೆ ಧ್ಯಾಸವಿಲ್ಲದ ಶಿಶುದೆಸೆಯಿಂದ, ಶರೀರದಲ್ಲಿನ ದ್ರವ್ಯಯಜ್ಞವನ್ನು ಜೀವಾತ್ಮನಿಗೆ ಸಂಬಂಧವಿಲ್ಲದೇ ಆತ್ಮ ಮಾಡುತ್ತಲೇ ಇದೆ. ಶರೀರದಲ್ಲಿ ಅಸಲಾದ ಜ್ಞಾನಯಜ್ಞಕ್ಕೆ ನಮೂನೆಯಂತಿರುವ ನಕಲಿ ಯಜ್ಞವಾದ ದ್ರವ್ಯಯಜ್ಞ ನಿತ್ಯವೂ ನಡೆಯುತ್ತಿದ್ದರೂ, ಕನಿಷ್ಟ ಜೀವನದಲ್ಲಿ ಒಂದು ದಿನವಾದರೂ ಅದನ್ನು ಕುರಿತು ಮನುಷ್ಯ ಆಲೋಚನೆ ಮಾಡುತ್ತಿಲ್ಲ. ಸಾಧಾರಣ ಮನುಷ್ಯನೇ ಅಲ್ಲದೇ ಜ್ಞಾನಿಗಳೆಂದುಕೊಳ್ಳುವವರಾಗಲಿ, ಸ್ವಾಮೀಜೀಗಳಾಗಲಿ, ಪೀಠಾಧಿಪತಿಗಳಾಗಲಿ, ಹಂಸರು, ಪರಮಹಂಸರು ಆದವರು ಯಾರಾದರೂ ಆಗಲಿ ಅಸಲಾದ ಜ್ಞಾನಯಜ್ಞಕ್ಕೆ ನಮೂನೆಯಂತಿರುವ ತಮ್ಮ ಶರೀರದಲ್ಲಿ ನಡೆಯುವ ದ್ರವ್ಯಯಜ್ಞವನ್ನು ಗಮನಿಸುತ್ತಿಲ್ಲ.

ದೇವರು ತನ್ನ ಜ್ಞಾನದಲ್ಲಿ ಹೇಳಿರುವುದು, ಶರೀರದಲ್ಲಿ ಕರ್ಮವನ್ನು ನಾಶಮಾಡುವುದು, ಒಂದೇ ಒಂದು ಜ್ಞಾನಯಜ್ಞವಿದೆ. ಅದು ಪ್ರತಿ ಮನುಷ್ಯನಿಗೂ ಇರುವುದೇ, ಅದು ಅರ್ಥವಾಗುವುದಕ್ಕೆ ಪ್ರತಿ ಮನುಷ್ಯನಲ್ಲಿ ದ್ರವ್ಯಯಜ್ಞವನ್ನು ನಮೂನೆಯಂತೆ ಇಟ್ಟರೂ, ಯಾವ ಮನುಷ್ಯನೂ ದ್ರವ್ಯಯಜ್ಞವನ್ನೂ ಸಹ ಗ್ರಹಿಸಲಿಲ್ಲ. ಮನುಷ್ಯ ಯಾವ ಮತದಲ್ಲಿದ್ದರೂ ಆತನಿಗೆ ದ್ರವ್ಯಯಜ್ಞ ನಿತ್ಯವೂ ನಡೆಯುತ್ತಲೇ ಇದೆ. ಜ್ಞಾನಯಜ್ಞಕ್ಕೆ ನಮೂನೆಯಂತಿರುವ ದ್ರವ್ಯಯಜ್ಞವನ್ನು ಕುರಿತು ಪೂರ್ತಿಯಾಗಿ ತಿಳಿದುಕೊಂಡರೇ ಈ ವಿಧವಾಗಿ ಇದೆ. ಯಜ್ಞ ಎಂದರೆ ಸುಟ್ಟುಹಾಕುವುದೆಂದು ತಿಳಿದುಕೊಂಡಿದ್ದೇವೆ. ದ್ರವ್ಯಯಜ್ಞವೆಂದರೆ ದ್ರವ್ಯಗಳನ್ನು ಸುಟ್ಟುಹಾಕುವುದೆಂದು ಅರ್ಥ. ದ್ರವ್ಯಯಜ್ಞ ನಮ್ಮ ಶರೀರದಲ್ಲಿನ ಜೀರ್ಣಾಶಯದಲ್ಲಿ ನಡೆಯುತ್ತದೆ. ಜೀರ್ಣ ಎಂದರೆ ನಾಶ ಎಂದು ಅರ್ಥ. ಜೀರ್ಣಾಶಯ ಅಂದರೆ ನಾಶ ಮಾಡುವುದೇ ಆಶಯವಾಗಿ ಅಥವಾ ಅಭಿಪ್ರಾಯವಾಗಿ ಇರುವುದು. ನಾಶಮಾಡುವುದೇ ಕೆಲಸದಂತೆ ಅಥವಾ ಅಭಿಪ್ರಾಯವಾಗಿ ಇರುವ ಜೀರ್ಣಾಶಯದಲ್ಲಿ ಯಾವುದು ಹಾಕಿದರೂ ಅದು ಜೀರ್ಣವಾಗಿ ಹೋಗುತ್ತದೆ. ಜೀರ್ಣಾಶಯದಲ್ಲಿ ಹಾಕಿದ ಯಾವುದನ್ನಾದರೂ ನಾಶಮಾಡ ಬಲ್ಲದ್ದು ಒಂದು ಇದೆ. ಅದೇ ಜಠರಾಗ್ನಿ. ಜಠ ಅಂದರೆ ಹೊಟ್ಟೆ, ಜಠರಾಗ್ನಿ ಎಂದರೆ ಹೊಟ್ಟೆಯಲ್ಲಿರುವ ಅಗ್ನಿ. ಜೀರ್ಣಾಶಯದಲ್ಲಿರುವ ಅಗ್ನಿ ಅಲ್ಲಿಗೆ ಬಂದಿರುವ ಎಲ್ಲವನ್ನು ಸುಟ್ಟುಹಾಕುತ್ತದೆ. ಶರೀರಕ್ಕೆ ಅಧಿಪತಿಯಾದ ಆತ್ಮದಿಂದ ಊರುವಂತಹಾ ರಸಗಳ ಸೇರುವಿಕೆಯಲ್ಲಿ ದ್ರವ್ಯಗಳನ್ನು ಸುಟ್ಟುಹಾಕುವ ಸಾಮರ್ಥ್ಯವಿದೆ. ಮೂರು ರಸಗಳು ಸೇರಿ ಅಗ್ನಿಬಲವನ್ನು ಹೊಂದಿ ಜೀರ್ಣಾ ಶಯದಲ್ಲಿ ದ್ರವ್ಯಗಳನ್ನು ನಾಶ ಮಾಡುತ್ತಿದೆ. ಆತ್ಮದಿಂದ ಊರುವಂತಹ ಅಗ್ನಿ ಜೀರ್ಣಾಶಯದೊಳಗೆ ಬಂದಿರುವ ನಾಲ್ಕು ವಿಧಗಳ ಆಹಾರಪದಾರ್ಥ ಗಳನ್ನು ಜೀರ್ಣ ಮಾಡುತ್ತಿದೆ. 1) ಹಿಟ್ಟಿನ ಪದಾರ್ಥಗಳು 2) ಮಾಂಸ (ಸಸಾರಜನಕ) ಪದಾರ್ಥಗಳು 3) ಖನಿಜ ಲವಣಗಳು 4) ಕೊಬ್ಬಿನ ಪದಾರ್ಥ ಗಳು ಅನ್ನುವ ನಾಲ್ಕು ವಿಧಗಳ ಆಹಾರಗಳನ್ನು ಜಠರಾಗ್ನಿ ಸುಟ್ಟುಹಾಕುತ್ತದೆ. ಪ್ರತಿ ದಿನವೂ

ಮನುಷ್ಯನ ಜೀರ್ಣಾಶಯದಲ್ಲಿ ಒಂದು ದಿನಕ್ಕೆ ಮೂರುಬಾರಿ ಅಥವಾ ನಾಲ್ಕು ಬಾರಿ ದ್ರವ್ಯಯಜ್ಞ ನಡೆಯುತ್ತಿದೆಯೆಂದು ಹೇಳಬಹುದು. ಇದೇ ವಿಷಯವನ್ನೇ ಭಗವದ್ಗೀತೆ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 14ನೇ ಶ್ಲೋಕದಲ್ಲಿ ಹೇಳಲಾಗಿದೆ.

***ಶ್ಲೋ॥ ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹ ಮಾಶ್ರಿತಃ***
***ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್.***

**ಭಾವಾರ್ಥ :-** "ನಾನು ಸಕಲ ಜೀವರಾಶಿಗಳ ಶರೀರಗಳಲ್ಲಿ ಅಗ್ನಿಯಾಗಿದ್ದು ಅವರು ಭುಜಿಸುತ್ತಿರುವ ನಾಲ್ಕು ವಿಧಗಳ ಆಹಾರ ಪದಾರ್ಥಗಳನ್ನು ಜೀರ್ಣ ಮಾಡುತ್ತಿದ್ದೇನೆ." ಎಂದು ಶರೀರದಲ್ಲಿನ ಆತ್ಮ ಹೇಳುತ್ತದೆ. ಆತ್ಮ ತನ್ನ ರಸಾಯನಿಕ ಆಮ್ಲಗಳಿಂದ ಯಾವುದನ್ನಾದರೂ ಜೀರ್ಣ ಮಾಡುವ ಅಗ್ನಿಶಕ್ತಿ ಇರುವಂತದ್ದಾಗಿದ್ದು, ಮನುಷ್ಯರು ಆಹಾರವಾಗಿ ತೆಗೆದುಕೊಳ್ಳುವ ಯಾವ ಆಹಾರವನ್ನಾದರೂ ನಾಲ್ಕು ವಿಧಗಳಾಗಿ ವಿಭಜಿಸಿ ಸುಟ್ಟುಹಾಕುತ್ತದೆ. ಪ್ರತಿ ದಿನವೂ ಜೀರ್ಣಾಶಯದಲ್ಲಿ ನಡೆಯುತ್ತಿರುವ ಕೆಲಸವೇ ದ್ರವ್ಯಯಜ್ಞ. ಈ ದ್ರವ್ಯಯಜ್ಞ ವಿಧಾನವೆಲ್ಲವೂ ತಲೆಯಲ್ಲಿರುವ ಜ್ಞಾನಯಜ್ಞಕ್ಕೆ ಹೋಲಿಕೆಯಂತೆ ಇದೆ. ಆದರೇ ಆ ಹೋಲಿಕೆ ಪ್ರಕಾರ ಕೆಲಸ ನಡೆಯುತ್ತಿಲ್ಲ. ದ್ರವ್ಯಯಜ್ಞವೊಂದರ ನಮೂನೆಯಂತೆ ನಡೆದರೆ ಜ್ಞಾನಯಜ್ಞ ಹೀಗೆ ಇರುತ್ತದೆ. ತಲೆಯಲ್ಲಿನ ನಾಲ್ಕು ಚಕ್ರಗಳ ಸಮುದಾಯದಲ್ಲಿ ಕೆಳಗಿನಿಂದ ಒಂದನೇ ಚಕ್ರವಾದ ಗುಣಚಕ್ರದಲ್ಲಿ ಜ್ಞಾನಯಜ್ಞ ನಡೆಯುತ್ತದೆ. ಗುಣಚಕ್ರದಲ್ಲಿ ಜೀವಿಯು ನಿವಾಸಮಾಡುತ್ತಿದ್ದಾನೆ. ಜೀವಿಯು ಗುಣಗಳ ಸಂಬಂಧ ದಿಂದ ಮಾಡುವ ಕಾರ್ಯಗಳಿಂದ ಪಾಪಪುಣ್ಯಗಳು ಎರಡೂ ಸೇರಿದ ಕರ್ಮ ಬರುತ್ತದೆ. ಎರಡು ಭಾಗಗಳಾದ ಕರ್ಮ, ಐದು ಜ್ಞಾನೇಂದ್ರಿಯಗಳ ಜ್ಞಾನದಿಂದ ಬರುತ್ತದೆ. ಮನುಷ್ಯ ಮಾಡುತ್ತಿರುವ ಕಾರ್ಯಗಳಿಂದ ಬರುವ ಕರ್ಮ ಐದು ವಿಧಗಳಾಗಿ ಬರುವುದರಿಂದ, ಜ್ಞಾನಯಜ್ಞದಲ್ಲಿ ಸುಟ್ಟುಹೋಗುವವು ಐದು ಇಂದ್ರಿಯಗಳ ಜ್ಞಾನಗಳೆಂದು ಹೇಳಬಹುದು. ಐದು ವಿಧಗಳ ಪ್ರಪಂಚ ಸಂಬಂಧ ಜ್ಞಾನಗಳು ಸುಟ್ಟುಹೋಗುವುದರಿಂದ, ಈ ಕಾರ್ಯವನ್ನು ಜ್ಞಾನಯಜ್ಞ ಎಂದು ಅನ್ನುತ್ತಿದ್ದೇವೆ.

ದ್ರವ್ಯಯಜ್ಞದಲ್ಲಿ ನಾಲ್ಕು ದ್ರವ್ಯಗಳು ಸುಟ್ಟುಹೋದರೆ, ಜ್ಞಾನ ಯಜ್ಞದಲ್ಲಿ ಐದು ಜ್ಞಾನಗಳು ಸುಟ್ಟುಹೋಗುತ್ತವೆ. ದ್ರವ್ಯಯಜ್ಞದಲ್ಲಿ ಸುಡುತ್ತಿರುವವು ನಾಲ್ಕು ಆಹಾರ ದ್ರವ್ಯಗಳಾದಾಗ, ಜ್ಞಾನಯಜ್ಞದಲ್ಲಿ ಸುಟ್ಟುಹೋಗುತ್ತಿರುವವು ಐದು ಪ್ರಪಂಚ ಜ್ಞಾನಗಳು. ದ್ರವ್ಯಯಜ್ಞದಲ್ಲಿ 1) ಹಿಟ್ಟಿನ ಪದಾರ್ಥಗಳು 2)ಮಾಂಸ ಪದಾರ್ಥಗಳು 3) ಖನಿಜ ಲವಣಗಳು 4) ಕೊಬ್ಬಿನ ಪದಾರ್ಥಗಳು ಜೀರ್ಣವಾಗುತ್ತಿರುವಾಗ (ಸುಟ್ಟುಹೋಗುತ್ತಿರುವಾಗ), ಜ್ಞಾನಯಜ್ಞದಲ್ಲಿ 1) ಕಣ್ಣು ದೃಷ್ಠಿ ಜ್ಞಾನ 2) ಕಿವಿ ಕೇಳುವಿಕೆ ಜ್ಞಾನ 3) ನಾಲಿಗೆ ರುಚಿ ಜ್ಞಾನ 4) ಮೂಗು ವಾಸನೆ ಜ್ಞಾನ 5) ಚರ್ಮ ಸ್ಪರ್ಶ ಜ್ಞಾನ ಸುಟ್ಟುಹೋಗುತ್ತವೆ. ಐದು ಜ್ಞಾನೇಂದ್ರಿಯಗಳ ಜ್ಞಾನದಿಂದ ಬರುವ ಪಾಪಪುಣ್ಯಗಳನ್ನು ದೈವಜ್ಞಾನ ಅನ್ನುವ ಅಗ್ನಿಯಿಂದ ಸುಟ್ಟುಹಾಕುವುದನ್ನು ಜ್ಞಾನಯಜ್ಞ ಅನ್ನುತ್ತಿದ್ದೇವೆ. ಹೊಟ್ಟೆಯಲ್ಲಿ ನಡೆಯುವ ದ್ರವ್ಯಯಜ್ಞಕ್ಕೆ ಋತ್ವಿಕನು ಆತ್ಮ ಆದಾಗ, ತಲೆಯಲ್ಲಿ ನಡೆಯುವ ಜ್ಞಾನಯಜ್ಞಕ್ಕೆ ಋತ್ವಿಕನು ಜೀವಾತ್ಮನು. ಆದರೇ ಯಾವ ಮನುಷ್ಯನಲ್ಲಾಗಲಿ ಜ್ಞಾನಯಜ್ಞ ನಡೆಯಬೇಕಾದ ಕಡೆ ದೈವಜ್ಞಾನವೆನ್ನುವ ಅಗ್ನಿ ಇಲ್ಲ. ಅಗ್ನಿ ಕುಂಡವಾದ ಗುಣ ಚಕ್ರದಲ್ಲಿ ಜ್ಞಾನಾಗ್ನಿ ಇಲ್ಲ. ಅಗ್ನಿಯನ್ನು ಸಂಪಾದಿಸಿಕೊಳ್ಳಬೇಕಾದ ಜೀವಿಯು ಜ್ಞಾನಾಗ್ನಿಯನ್ನು ಕುರಿತು ಯಾವ ಮಾತ್ರವೂ ಯೋಚಿಸುತ್ತಿಲ್ಲ, ಪ್ರಯತ್ನಿಸುತ್ತಿಲ್ಲ. ಜ್ಞಾನಯಜ್ಞವನ್ನು ಮಾಡಬೇಕಾದ ಋತ್ವಿಕನಾದ ಜೀವಿಯು ಕರ್ಮಗಳೆನ್ನುವ ಕಟ್ಟಿಗೆಗಳನ್ನು ಜಮ ಮಾಡಿಕೊಳ್ಳುತ್ತಿದ್ದಾನೆ ಆದರೆ, ಅವುಗಳನ್ನು ಕುಂಡದಲ್ಲಿ ಹಾಕಿ ಜ್ಞಾನಾಗ್ನಿಯಿಂದ ಸುಡಬೇಕೆಂದು ಅಂದುಕೊಳ್ಳುತ್ತಿಲ್ಲ. ಆದ್ದರಿಂದ ಯಾವ ಶರೀರದಲ್ಲಾಗಲಿ ಜ್ಞಾನಯಜ್ಞ ನಡೆಯುತ್ತಿಲ್ಲ.

ಶರೀರದ ಹೊರಗೆ ಹೊರತು ಶರೀರದೊಳಗೆ ಧ್ಯಾಸವಿಲ್ಲದ ಮನುಷ್ಯ ಶರೀರದಲ್ಲಿನ ಯಜ್ಞಗಳನ್ನು ಕುರಿತು ಆಲೋಚಿಸಲಿಲ್ಲ. ಪ್ರತಿ ಮನುಷ್ಯ ಹುಟ್ಟಿದ್ದು ಮೊದಲು ಚಿಕ್ಕಂದಿನಿಂದ ಬದುಕುವುದಕ್ಕೆ ಬೇಕಾದ ಓದನ್ನೇ ಕಲಿಯುತ್ತಿದ್ದಾನೆ. ಹೀಗೆ ಜೀವನದ ಪ್ರಾರಂಭದಲ್ಲೇ ಓದುಕೊಳ್ಳುವುದು ಉದ್ಯೋಗ ಮಾಡುವು ದಕ್ಕೆಂದು, ಉದ್ಯೋಗ ಬದುಕುವುದಕ್ಕೆಂದು, ಬದುಕುವುದು ಹೆಂಡತಿ

ಮಕ್ಕಳಿಗೋಸ್ಕರವೆಂದು, ಮಕ್ಕಳು ತನ್ನ ಹೆಸರು ಹೇಳುವುದಕ್ಕೆಂದು, ಮನುಷ್ಯ ಅಂದುಕೊಳ್ಳುತ್ತಿದ್ದಾನೆ. ಹಾಗೆ ಅಂದುಕೊಳ್ಳುವುದರಿಂದ ಜೀವನವೆಲ್ಲಾ ಕೆಲಸ ಮಾಡುವುದೇ ನಡೆಯುತ್ತಿದೆ. ಓದು ಮುಗಿಸುವುದಕ್ಕೆ ಸುಮಾರು 25 ವರ್ಷಗಳು ಬೇಕಾದಾಗ, ಓದು ಮುಗಿದ ಕೂಡಲೇ ಉದ್ಯೋಗ ಮಾಡುವುದಕ್ಕೆ ಹುಡುಕುವುದು, ಉದ್ಯೋಗ ಬಂದಕೂಡಲೇ ಹೆಚ್ಚಿನ ಸ್ಥಾನಕ್ಕೋಸ್ಕರ (ಪ್ರಮೋಷನ್ ಗೋಸ್ಕರ) ಅಲೆದಾಡುವುದು, ಪ್ರಮೋಷನ್ ಬಂದ ನಂತರ ಮಕ್ಕಳಿಗೆ, ಹೆಂಡತಿಗೆ ಆಸ್ತಿಯನ್ನು ಸಂಪಾದಿಸುವುದರಲ್ಲಿ ಕಾಲ ಕಳೆಯುವುದೂ, ಉದ್ಯೋಗ ಮುಗಿದ ನಂತರ ಮಕ್ಕಳ ಜೀವನಕ್ಕೋಸ್ಕರ ಆಲೋಚನೆಯನ್ನು ಮಾಡಿ ಅವರನ್ನು ಉನ್ನತ ಸ್ಥಿತಿಯಲ್ಲಿ ನೋಡಬೇಕೆಂದುಕೊಳ್ಳುವುದು, ಅವರು ಉನ್ನತ ಸ್ಥಿತಿಗೆ ಹೋದ ನಂತರವೂ ಸಹ ಮೊಮ್ಮಕ್ಕಳಿಗೂ ಆಸ್ತಿಯನ್ನು ಮಾಡಬೇಕೆಂದು ಪರದಾಡುತ್ತಾ ಒಂದು ದಿನ ಸತ್ತುಹೋಗುವುದು ನಡೆಯುತ್ತಿದೆ. ಈ ವಿಧವಾಗಿ ಪ್ರತಿ ಮನುಷ್ಯ ಹುಟ್ಟಿದ್ದು ಮೊದಲಗೊಂಡು ಸಾಯುವವರೆಗು, ಬಿಡುವಿಲ್ಲದೆ ಯಾವುದೊ ಒಂದಕ್ಕೋಸ್ಕರ ಹೋರಾಡುತ್ತಲೇ ಬದುಕುತ್ತಿದ್ದಾನೆ. ಮನುಷ್ಯ ತನ್ನ ಜೀವನವನ್ನು ಸಾಗಿಸುವುದಕ್ಕೆ ಒಂದು ಉಪಾಧಿಯನ್ನು ಹುಡುಕುವುದು, ಅದರಲ್ಲೇ ಜೀವನ ಕಾಲವೆಲ್ಲವೂ ಕಳೆಯುವುದು ನಡೆಯುತ್ತಿದೆ. ಕೆಲವರಾದರೆ ಬದುಕುವುದಕ್ಕೇ ನಿತ್ಯವೂ ಕೆಲಸಗಳನ್ನು ಹುಡುಕಿಕೊಂಡು ಅವುಗಳನ್ನು ಮಾಡಿ, ಅವುಗಳಿಂದ ಬಂದಿರುವ ಆದಾಯದಲ್ಲಿ ಜೀವನದ ಬಂಡಿಯನ್ನು ಭಾರದಿಂದ ಎಳೆಯುವವರೂ ಸಹ ಇದ್ದಾರೆ. ಹೀಗೆ ಎಷ್ಟೋ ಜನರು ಸುಖವಾಗಿ ಬದುಕುವುದಕ್ಕೆ ಬಿಡುವಿಲ್ಲದೇ ಇದ್ದಾರೆ. ಹಾಗೆ ಕೆಲವರು ಕಷ್ಟವಾಗಿ ಬದುಕುವುದಕ್ಕೂ ಸಹ ಬಿಡುವಿಲ್ಲದೇ ತಮ್ಮ ದೃಷ್ಟಿ ಎಲ್ಲವನ್ನು ಜೀವನೋಪಾಯಕ್ಕಾಗಿ ಪ್ರಪಂಚ ವಿಷಯಗಳಲ್ಲಿ ಲಗ್ನ ಮಾಡುತ್ತಿದ್ದಾರೆ.

ಈ ವಿಧವಾಗಿ ಬಿಡುವಿಲ್ಲದೇ ಮನುಷ್ಯ ತನ್ನ ಮನೋದೃಷ್ಠಿ ಎಲ್ಲವನ್ನೂ ಹೊರಗಿನ ಪ್ರಪಂಚದಲ್ಲಿ ಲಗ್ನಮಾಡಿದ್ದಾನೆ. ಅಂತಹದರಲ್ಲಿ ಮನುಷ್ಯ ಯಜ್ಞವನ್ನು ಕುರಿತಾಗಲಿ, ದ್ರವ್ಯಯಜ್ಞವನ್ನು ಕುರಿತಾಗಲೀ, ಜ್ಞಾನಯಜ್ಞವನ್ನು ಕುರಿತಾಗಲೀ

ಆಲೋಚಿಸುವ ಸ್ಥಿತಿಯಲ್ಲಿ ಇಲ್ಲ. ದ್ರವ್ಯಯಜ್ಞ, ಜ್ಞಾನಯಜ್ಞಗಳ ವಿಷಯವೇ ತಿಳಿಯದಿರುವಾಗ ಅವುಗಳಿಗೋಸ್ಕರ ಯಾವನೂ ಪ್ರಯತ್ನಿಸುವುದಿಲ್ಲ. ಯಾರಾದರೂ ಯಜ್ಞವನ್ನು ಕುರಿತು ದೇವರು ಹೀಗೆ ಹೇಳಿದ್ದಾನೆಂದು ಹೇಳಿದರೇ ಅದನ್ನು ಕೇಳಿದರೂ, ತನ್ನ ಆಶಯವನ್ನೆಲ್ಲಾ ಸಂಪಾದನೆಯಗೋಸ್ಕರವೇ ಇರುವುದರಿಂದ ಯಜ್ಞ ವಿಷಯ ಮನುಷ್ಯನ ಬುದ್ಧಿಗೆ ಎಟಕುವುದಿಲ್ಲ. ಕೆಲವರು ಬುದ್ಧಿವಂತರು ಋತ್ವಿಕರು ಮನುಷ್ಯ ಆಸೆ ಅನ್ನುವ ಗುಣದಿಂದ ಸಿಲುಕಿಕೊಂಡಿರುವುದರಿಂದ, ಅವನ ದೃಷ್ಠಿಗೆ ಕೋರಿಕೆಗಳು ಹೊರತು ಏನೂ ಕಾಣಿಸುವುದಿಲ್ಲವೆಂದು ತಿಳಿದವರಾಗಿ, ಯಜ್ಞಗಳು ಕೋರಿಕೆಗಳನ್ನು ತೀರಿಸುವುದಕ್ಕೆ ತಯಾರು ಮಾಡಿರುವವೆಂದು, ಅವುಗಳನ್ನು ನಾವು ಮಾಡುತ್ತೇವೆ ನೀವು ಮಾಡಿಸಿರೆಂದು ಹೇಳುವುದರಿಂದ, ಮನುಷ್ಯ ತನ್ನ ಕೋರಿಕೆಗಳ ನಿಮಿತ್ತ ಯಜ್ಞಗಳನ್ನು ಮಾಡಿಸುತ್ತಿದ್ದಾನೆ. ಯಜ್ಞಗಳಿಂದ ತಮ್ಮ ಕೋರಿಕೆಗಳು ಈಡೇರುತ್ತವೆಂದು ತಿಳಿದು ಆರ್ಥಿಕ ಸಾಮರ್ಥ್ಯ ಇರುವವರು ಯಜ್ಞಗಳನ್ನು ಮಾಡಿಸುವ ಕಾರ್ಯದಲ್ಲಿ ಎಷ್ಟೋ ಜನರಿದ್ದರೆ, ಯಜ್ಞಗಳನ್ನು ಕುರಿತು ಹೇಳಿ ಮಾಡಿಸುವುದೇ ಕಾರ್ಯವಾಗಿ ಇಟ್ಟುಕೊಂಡವರು ಕೆಲವರು ಇದ್ದಾರೆ. ಈ ವಿಧವಾಗಿ ತ್ರೇತಾಯುಗದಿಂದ ಬಾಹ್ಯಯಜ್ಞಗಳು ಮಾಡುವುದು ಮನುಷ್ಯರಿಗೆ ಅಭ್ಯಾಸವಾಗಿದೆ. ಆ ಕಾಲದಲ್ಲಿ ರಾಜರು ಯಾವುದೋ ಒಂದು ಕಾಂಕ್ಷದಿಂದ ಮಹರ್ಷಿಗಳನ್ನು ಕರೆದು ಅವರಿಂದ ಯಜ್ಞಗಳನ್ನು ಮಾಡಿಸುತ್ತಿದ್ದರು. ಕೆಲವರು ಮಹರ್ಷಿಗಳು ರಾಜರ ಹತ್ತಿರಕ್ಕೆ ಬಂದು ಇಂತಹಾ ಯಜ್ಞವನ್ನು ಮಾಡೋಣ. ಅದರಿಂದ ನಿಮಗೂ ನಿಮ್ಮ ರಾಜ್ಯಕ್ಕೂ ಇಂತಹ ಒಳ್ಳೆದು ನಡೆಯುತ್ತದೆಂದು ಹೇಳಿ, ಅದಕ್ಕೆ ಬೇಕಾದ ಧನವನ್ನು ತೆಗೆದುಕೊಂಡು ಹೋಗಿ, ಅವರಿರುವ ಕಡೆಯೇ ಯಜ್ಞಗಳನ್ನು ಮಾಡುತ್ತಿದ್ದರು. ಈ ವಿಧವಾಗಿ ಪ್ರಾರಂಭವಾದ ಬಾಹ್ಯ ಯಜ್ಞಗಳು ಅವುಗಳನ್ನು ಮಾಡುವವರಿಗೆ ವೃತ್ತಿಯಾಗಿ, ಮಾಡಿಸುವವರಿಗೆ ಆರಾಧನೆಯಂತೆ ಬದಲಾಗಿವೆ.

**ಆಸೆಗಳಿಲ್ಲದೆ ಮಾಡಬೇಕಾಗಿರುವ ದೇವರ ಆರಾಧನೆಗಳು ಸಹಿತ ಕೊನೆಗೆ ಆಸೆಗಳಿಂದ ಕೂಡಿಕೊಂಡ ಆರಾಧನೆಗಳಾಗಿ ಬದಲಾಗಿವೆ.** ಈ ಕೆಲಸ ಮಾಡಿದರೆ ನನಗೆ ಏನು ಲಾಭ ಬರುತ್ತದೆಂದು ಆಲೋಚಿಸುವ ಮನುಷ್ಯ, ಈ ಆರಾಧನೆ ಮಾಡಿದರೆ ನನಗೆ ಏನು ಬರುತ್ತದೆಂದು, ಈ ಯಜ್ಞ ಮಾಡಿದರೆ ಏನು ಬರುತ್ತದೆಂದು, ಲಾಭಕ್ಕೋಸ್ಕರ ನೋಡುತ್ತಿದ್ದಾನೆ. ಆದ್ದರಿಂದ ಆಚಾರಿ ಮಾರಬೇಕಾದ ದಂಡ (ಹಾರ) ಕೊನೆಗೆ ದಂಡವಾಗಿ ಬದಲಾದಹಾಗೆ, ದೇವರು ಹೇಳಿದ ಕರ್ಮನಾಶ ಮಾಡುವ ಜ್ಞಾನಯಜ್ಞ, ಕೊನೆಗೆ ಕರ್ಮಗಳನ್ನು ಸೃಷ್ಠಿಸುವ ಬಾಹ್ಯಯಜ್ಞವಾಗಿ ಬದಲಾಗಿದೆ. ಕರ್ಮಗಳನ್ನು ಜ್ಞಾನಯಜ್ಞ ನಾಶ ಮಾಡು (ಜೀರ್ಣ ಮಾಡು) ವುದೆಂದು ತಿಳಿಸುವುದಕ್ಕೆ ದ್ರವ್ಯಗಳನ್ನು ನಾಶ ಮಾಡುವುದೇ (ಜೀರ್ಣ ಮಾಡುವುದೇ) ಆಶಯವಾಗಿ ಇರುವ ಜೀರ್ಣಾಶಯವನ್ನು ದೇವರು ನಮೂನೆಯಂತೆ ಶರೀರದಲ್ಲಿ ಇಟ್ಟು, ಇದು ದ್ರವ್ಯ ಯಜ್ಞವೆಂದು, ಇದಕ್ಕಿಂತ ಶ್ರೇಷ್ಠವಾದದ್ದು ಕರ್ಮಗಳನ್ನು ಜೀರ್ಣ ಮಾಡುವುದು ಜ್ಞಾನಯಜ್ಞವೆಂದು ಭಗವದ್ಗೀತೆಯಲ್ಲಿ ತಿಳಿಸಿರುವಾಗ, ಭಗವದ್ಗೀತೆಯನ್ನು ಬೋಧಿಸುವ ಬೋಧಕರಿಗೆ ದ್ರವ್ಯಯಜ್ಞವನ್ನು ಕುರಿತಾಗಲೀ, ಅದಕ್ಕಿಂತ ಶ್ರೇಷ್ಠವಾದ ಜ್ಞಾನಯಜ್ಞವನ್ನು ಕುರಿತಾಗಲೀ ಏನೂ ಅರ್ಥವಾಗಿಲ್ಲ. ದೇವರು ಹೇಳಿದ ಯಜ್ಞಗಳು ತಮ್ಮ ದೃಷ್ಠಿಗೆ ಕಾಣಿಸದೇ ಹೋಗುವುದಲ್ಲದೆ, ಅವುಗಳ ಸ್ಥಾನದಲ್ಲಿ ಕರ್ಮಗಳನ್ನು ಸಂಪಾದಿಸುವ, ಕೋರಿಕೆಗಳು ಈಡೇರುವ ಬಾಹ್ಯಯಜ್ಞಗಳು ದೊಡ್ಡದಾಗಿ ಕಾಣಿಸಿವೆ. ತಮ್ಮ ನೋಟಕ್ಕೆ ಬಾಹ್ಯಯಜ್ಞಗಳು ಬಿಟ್ಟರೇ ಶರೀರದಲ್ಲಿನ ಅಂತರ್ಗತ ಯಜ್ಞಗಳು ಕಾಣಿಸದೇ ಹೋಗುವುದರಿಂದ, ದ್ರವ್ಯಯಜ್ಞ ತಿಳಿಯಲಿಲ್ಲ. ಅದರ ನಮೂನೆಯಾದ ಜ್ಞಾನಯಜ್ಞ ತಿಳಿಯಲಿಲ್ಲ.

ಬಾಹ್ಯಯಜ್ಞಗಳನ್ನು ಯಾವುದೋ ಒಂದು ಕೋರಿಕೆಯಿಂದಲೇ ಮಾಡುತ್ತಿರುವರು. ಸಮಾಜಕ್ಕೆ ಸಂಬಂಧಿಸಿದ ಲಾಭಕ್ಕೋಸ್ಕರವಾಗಲೀ, ದೇಶಕ್ಕೆ ಸಂಬಂಧಿಸಿದ ಲಾಭಗೋಸ್ಕರವಾಗಲೀ, ಅಥವಾ ತನಗೂ ತನ್ನ ಕುಟುಂಬಕ್ಕೂ ಸಂಬಂಧಿಸಿದ ಲಾಭಗೋಸ್ಕರವಾಗಲಿ ಬಾಹ್ಯಯಜ್ಞಗಳನ್ನು ಮಾಡುತ್ತಿದ್ದಾರೆ.

ಯಾವುದೋ ಒಂದು ಕೋರಿಕೆ ನಿಮಿತ್ತ ಯಜ್ಞಗಳನ್ನು ಮಾಡುವಾಗ, ಆ ಕೋರಿಕೆಗಳು ಈಡೇರುವಹಾಗೆ ತಿಳಿದುಕೊಂಡಿದ್ದೇವೆ. ಯಜ್ಞಗಳನ್ನು ಮಾಡಿದರೆ ರಾಮನು ಹುಟ್ಟಿದ್ದಾನೆನ್ನುವ ತ್ರೇತಾಯುಗದ ಕಾಲದಿಂದ ಇಂದಿನವರೆಗು ಯಜ್ಞಗಳಿಂದ ಕೋರಿಕೆಗಳು ಈಡೇರುತ್ತವೆಂದು ಕೇಳುತ್ತಿದ್ದೇವೆ. ಇಂದಿನ ಕಾಲದಲ್ಲಿ ಮಳೆಗೋಸ್ಕರ ಪ್ರಭುತ್ವದವರೇ ವರುಣ ಯಜ್ಞವನ್ನು ಮಾಡಿಸಿರುವಾಗ ಅನೇಕ ಜನ ಋತ್ವಿಕರು ಮಾಡಿದ್ದಾರೆ. ಆಗಾಗ ತಿರುಪತಿ ದೇವಸ್ಥಾನದವರೂ ಸಹ ಯಾವುದೋ ಒಂದು ಹೆಸರು ಇಟ್ಟು, ಯಾವುದೋ ಒಂದು ಯಜ್ಞ ಮಾಡುವುದು ನೋಡುತ್ತಿದ್ದೇವೆ. ಹಾಗೇ ಅನೇಕ ದೇವಸ್ಥಾನಗಳಲ್ಲಿ ಚಿಕ್ಕ ಯಜ್ಞದಿಂದ ದೊಡ್ಡಸ್ಥಾನ ಯಾಗದ ವರೆಗು ಮಾಡುತ್ತಿರುವುದನ್ನು ನೋಡುತ್ತಿದ್ದೇವೆ. ಇವರೆಲ್ಲರೂ ಯಾವುದೋ ಒಂದು ಒಳ್ಳೆಯದು ನಡೆಯಬೇಕೆನ್ನುವ ಸಂಕಲ್ಪದಿಂದ ಯಜ್ಞಗಳನ್ನು ಮಾಡುವಾಗ, ಕೆಲವು ಯಜ್ಞಗಳಿಗೆ ಕೆಲವು ಈಡೇರುತ್ತವೆ. ಲಾಭವನ್ನು ಕೋರಿ ಮಾಡುವ ಪ್ರತಿಯೊಂದು ಯಜ್ಞ ಫಲವನ್ನು ಕೊಡದೇ ಹೋದರೂ, ಕೆಲವು ಯಜ್ಞಗಳು ಮಾತ್ರ ಕೋರಿಕೆಗಳನ್ನು ಈಡೇರಿಸುತ್ತವೆ. ಪೂರ್ತಿ ಕರ್ಮಕ್ಕೆ ವಿರುದ್ಧವಾದ ಕಡೆ ಮಾತ್ರ ಯಜ್ಞವನ್ನು ಮಾಡಿದರೂ ಫಲವಿಲ್ಲದೇ ಹೋಗುತ್ತದೆ. ಒಂದು ವಿಧವಾಗಿ ಹೇಳಿದರೆ ನೂರಕ್ಕೆ ತೊಂಬತ್ತು ಯಜ್ಞಗಳಲ್ಲಿ ಕೋರಿಕೆಗಳು ಈಡೇರುತ್ತಿವೆಯೆಂದು ಹೇಳಬಹುದು. ಯಜ್ಞಗಳು ಮಾಡಿದರೆ ಕೋರಿಕೆಗಳು ಈಡೇರುತ್ತವಾ, ವರುಣ ಯಜ್ಞ ಮಾಡಿದರೆ ಮಳೆ ಬರುತ್ತದಾ ಎಂದು ಹೇತುವಾದಿಗಳು, ನಾಸ್ತಿಕವಾದಿಗಳು ಪ್ರಶ್ನಿಸಬಹುದು. ನಾಸ್ತಿಕವಾದಿಗಳ ಪ್ರಶ್ನೆಗೆ ನಾನು ಉತ್ತರ ಹೇಳುವುದಿಲ್ಲ. ಆದರೆ ಹೇತುವಾದಿಗಳು ಕೇಳುವ ಪ್ರಶ್ನೆಗೆ ತಪ್ಪದೆ ಉತ್ತರ ಕೊಡುತ್ತೇನೆ. ನಾಸ್ತಿಕವಾದಿಗಳು ಶಾಸ್ತ್ರಬದ್ಧತೆಯನ್ನು ಬಿಟ್ಟು ಮಾತನಾಡುತ್ತಾರೆ. ಆದ್ದರಿಂದ ಅವರ ಪ್ರಶ್ನೆಗೆ ಉತ್ತರ ಕೊಡುವುದಿಲ್ಲ. ಹೇತುವಾದಿಗಳು ಶಾಸ್ತ್ರಬದ್ಧತೆಯನ್ನು ಹೊಂದಿ, ಶಾಸ್ತ್ರಬದ್ಧವಾದ ಉತ್ತರವನ್ನು ಒಪ್ಪಿಕೊಳ್ಳುತ್ತಾರೆ. ಆದ್ದರಿಂದ ಹೇತುಬದ್ಧವಾದ ಯಾವ ಪ್ರಶ್ನೆಗಾದರೂ ಉತ್ತರವನ್ನು ಕೊಡಬಲ್ಲೆವು.

ನಾವು ಜ್ಞಾನಯಜ್ಞ ಅಲ್ಲದಂತಹಾ ಬಾಹ್ಯಯಜ್ಞಗಳನ್ನು ಅಧರ್ಮ ಗಳೆಂದು ಹೇಳುತ್ತಿದ್ದರೂ, ಅವುಗಳಲ್ಲಿ ಏನು ನಡೆಯುತ್ತಿದೆಯೋ, ಅವುಗಳಿಂದ ಮನುಷ್ಯ ಏನು ಹೊಂದುತ್ತಿದ್ದಾನೋ, ಹೇಗೆ ಹೊಂದುತ್ತಿದ್ದಾನೋ ತಿಳಿದಿದೆ ಆದ್ದರಿಂದ ಅದನ್ನು ಕುರಿತಿರುವ ಉತ್ತರವನ್ನು ಹೇಳಬಲ್ಲೆನು. ಪ್ರತಿ ಬಾಹ್ಯ ಯಜ್ಞದ ಹಿಂದೆ  ಕಾಣಿಸದ ಭೂತವಾಗಲೀ, ಗ್ರಹವಾಗಲೀ ಇರುತ್ತದೆ. ಭೂತ, ಗ್ರಹ ಎಂದರೇ ಶರೀರದೊಳಗೆ ಬರುವ ದೆವ್ವ ಎಂದು ಅಂದುಕೊಳ್ಳಬೇಡಿ. ಭೂತವಾಗಲೀ, ಗ್ರಹವಾಗಲೀ ಖಗೋಳದಲ್ಲಿರುವ ಶಕ್ತಿಗಳೆಂದು ನೆನಪಲ್ಲಿಟ್ಟುಕೊಳ್ಳ ಬೇಕು. ಬಾಹ್ಯಯಜ್ಞದ ಹಿಂದೆ ಕಾಣಿಸದೇ ಇರುವ ಶಕ್ತಿ ಗ್ರಹವಾಗಲೀ ಅಥವಾ ಭೂತವಾಗಲೀ ಆಗಿರುತ್ತದೆ. ಅದೇ ಆ ಯಜ್ಞಕ್ಕೆ ಅಧಿಪತಿಯಾಗಿ ಇರುತ್ತದೆ. ಯಜ್ಞ ಮಾಡುವ ಋತ್ವಿಕನು ಆ ಯಜ್ಞಕ್ಕೆ ಯಾವುದೋ ಒಂದು ದೇವತೆಯನ್ನು ದೊಡ್ಡದಾಗಿ ಇಟ್ಟುಕೊಂಡು, ಆ ದೇವತೆಗೆ ಸಂಬಂಧಿಸಿದ ಮಂತ್ರಗಳನ್ನೇ ಓದಿ, ಯಜ್ಞದಲ್ಲಿ ಹಾಕುವ ಪ್ರತಿ ವಸ್ತು  ಆ ದೇವತೆಗೇ ಸೇರಬೇಕೆಂದು ಸಮರ್ಪಿಸಿದರೂ ಅವರಿಗೆ ತಿಳಿಯದೇ, ಅವರ ಕಣ್ಣಿಗೆ ಕಾಣಿಸದೇ ಎಲ್ಲವೂ ಬೇರೆಯಾಗಿ ನಡೆಯುತ್ತಿರುತ್ತದೆ. ಅವರು ಅಂದುಕೊಂಡ ದೇವತೆ ಅಲ್ಲಿರುವುದಿಲ್ಲ. ಅಲ್ಲಿ ಖಗೋಳದಿಂದ ಬಂದಿರುವ ಗ್ರಹಶಕ್ತಿಯೋ ಅಥವಾ ಭೂತ ಶಕ್ತಿಯೋ ಯಾವುದೋ ಒಂದು ಇದ್ದು, ಅವರು ಅಗ್ನಿಕುಂಡದಲ್ಲಿ ಹಾಕುವ ಪ್ರತಿ ವಸ್ತುವಿನಲ್ಲಿನ ಸೂಕ್ಷ್ಮವನ್ನು ಗ್ರಹಿಸುತ್ತಿರುತ್ತದೆ. ಒಂದು ರೇಷ್ಮೆ ವಸ್ತ್ರವನ್ನು ಯಜ್ಞದೊಳಗೆ ಹಾಕಿದಾಗ ಅದು ಸುಟ್ಟುಹೋಗುವುದು ನಮ್ಮ ಕಣ್ಣಿಗೆ ಕಾಣಿಸಿದರೂ ವಸ್ತ್ರದಲ್ಲಿನ ಅರ್ಥ ಮಾತ್ರ ಸೂಕ್ಷ್ಮವಸ್ತ್ರವಾಗಿ ಗ್ರಹಶಕ್ತಿಗೆ ಸೇರುತ್ತದೆ. ಇಲ್ಲಿ ಒಂದು ವಿಷಯವನ್ನು ಎಲ್ಲರೂ ಗ್ರಹಿಸಬೇಕು, ಅದೇನೆಂದರೆ!

ಪ್ರಪಂಚದಲ್ಲಿ ಜೀವವಿರುವ, ಜೀವವಿಲ್ಲದ ಯಾವ ಪದಾರ್ಥಕ್ಕಾದರೂ, ಸ್ಥೂಲ ಸೂಕ್ಷ್ಮಗಳ ರೂಪಗಳಿರುತ್ತವೆ. ತುಪ್ಪ ಒಂದು ದ್ರವಪದಾರ್ಥವಲ್ಲವೆ! ಆ ಪದಾರ್ಥದಲ್ಲಿ ಆತ್ಮ, ಜೀವಾತ್ಮ ಇಲ್ಲದಿದ್ದರೂ ಪರಮಾತ್ಮ ಮಾತ್ರವಿರುತ್ತದೆ. ಜೀವವಿರುವುದರಲ್ಲಿ ಮೂರು ಆತ್ಮಗಳಿದ್ದಹಾಗೆ ಮೊದಲೇ ಹೇಳಿಕೊಂಡಿದ್ದೇವೆ.

ಜೀವ ಇಲ್ಲದಿರುವುದರಲ್ಲಿ ಪರಮಾತ್ಮ ಇರುತ್ತದೆ. ಪರಮಾತ್ಮ ಅಣುಅಣುವಿನಲ್ಲಿ ವ್ಯಾಪಿಸಿದೆ. ಆದ್ದರಿಂದ ಯಾವುದರಲ್ಲಾದರೂ ಪರಮಾತ್ಮ ಇದೆ. ಆದ್ದರಿಂದ ಯಾವುದನ್ನಾದರೂ ಒಂದು ಪದಾರ್ಥವಾಗಿ ಹೇಳಿಕೊಳ್ಳುತ್ತಿದ್ದೇವೆ. ಪದಾರ್ಥ ವನ್ನು ಬಿಡಿಸಿ ನೋಡಿದರೆ ಪದ + ಅರ್ಥ = ಪದಾರ್ಥ ಆಗುತ್ತಿದೆಯಲ್ಲವೆ! ಪದ ಅಂದರೇ ಹೆಸರು ಇರುವುದು ಯಾವುದಾದರೂ ಆಗಬಹುದು. ಅರ್ಥ ಅಂದರೇ ಧನ ಅಥವಾ ಸಾರಾಂಶ ಎಂದು ತಿಳಿದಿದೆ. ಒಂದು ವಸ್ತುವಿನಲ್ಲಿನ ಸಾರಾಂಶ ಅದರಲ್ಲಿನ ಪರಮಾತ್ಮವೇ ಎಂದು ತಿಳಿಯಬೇಕು. ಕಣ್ಣಿಗೆ ಕಾಣಿಸುವ ಜೀವವಿಲ್ಲದ ಪದಾರ್ಥದಲ್ಲಿಯೂ ಸಹ ಸ್ಥೂಲ, ಸೂಕ್ಷ್ಮ ರೂಪಗಳಿವೆ. ಈಗ ಒಂದು ಬಾಹ್ಯ ಯಜ್ಞದಲ್ಲಿ ದ್ರವಪದಾರ್ಥವಾದ ತುಪ್ಪವನ್ನು ಅಗ್ನಿಕುಂಡದಲ್ಲಿ ಹಾಕಿದಾಗ, ಸ್ಥೂಲವಾಗಿ ಕಾಣಿಸುವ ತುಪ್ಪ ಅಗ್ನಿಯಲ್ಲಿ ಸುಟ್ಟುಹೋಗುತ್ತಿದೆ. ಆಗ ತುಪ್ಪ ಒಂದರ ಸ್ಥೂಲರೂಪ ಅಗ್ನಿಯಲ್ಲಿ ಸುಟ್ಟುಹೋದರೂ, ಅದರ ಸೂಕ್ಷ್ಮ ರೂಪವು ಮಾತ್ರ ಉಳಿದಿರುತ್ತದೆ. ತುಪ್ಪ ಸುಟ್ಟುಹೋದಾಗ ಅದರ ಸೂಕ್ಷ್ಮ ರೂಪ ವಾಯುವಂತೆ ಬದಲಾಗಿ ಗಾಳಿಯಲ್ಲಿ ಸೇರಿ ಸೂಕ್ಷ್ಮವಾಗಿ, ಅಲ್ಲೇ ಯಜ್ಞಕ್ಕೆ ಅಧಿಪತಿಯಾಗಿರುವ ಶಕ್ತಿಗೆ ಸೇರುತ್ತದೆ. ಯಜ್ಞದಲ್ಲಿ ಸುಡುವ ಪ್ರತಿ ವಸ್ತು ಅಲ್ಲೇ ಇರುವ ಗ್ರಹಶಕ್ತಿಗೆ ಸೇರುತ್ತಿದೆ. ಯಜ್ಞದಲ್ಲಿ ಎಷ್ಟು ಒಳ್ಳೆ ವಸ್ತುಗಳನ್ನು ಹಾಕಿದರೇ ಅಷ್ಟು ಒಳ್ಳೆ ಫಲ ಬೇಗ ಬರುತ್ತದೆಂದು, ಯಜ್ಞದಲ್ಲಿ ಹಾಕುವ ವಸ್ತುಗಳು ತಾವು ಉಚ್ಛಾರಣೆ ಮಾಡಿದ ದೇವತೆಗೆ ಸೇರುತ್ತಿವೆಯೆಂದು, ಯಜ್ಞಗಳನ್ನು ಮಾಡುವವರು ಅಂದುಕೊಳ್ಳುತ್ತಿರುವರು. ಋತ್ವಿಕರು ಮಳೆಗೋಸ್ಕರ ಯಜ್ಞವನ್ನು ಮಾಡುವಾಗ, ವರುಣ ದೇವರ ಆವಾಹನ ಮಂತ್ರಗಳನ್ನು ಓದಿ, ವರುಣನಿಗೆ ಸಂಬಂಧಿಸಿದ ವೇದ ಮಂತ್ರಗಳನ್ನು ಪಠಿಸಿ, ತಾವು ಯಜ್ಞಕುಂಡದಲ್ಲಿ ಹಾಕುವ ವಸ್ತುಗಳೆಲ್ಲವೂ ವರುಣನು ಸ್ವೀಕರಿಸಿ, ಮಳೆಯನ್ನು ಸುರಿಸಬೇಕೆಂದು ಮಂತ್ರರೂಪದಲ್ಲಿ ಹೇಳಿ ವರುಣ ಯಜ್ಞವನ್ನು ಮಾಡಿದರೆ, ಯಜ್ಞಸಮಿಧೆಗಳಾಗಿ ಅಗ್ನಿಯಲ್ಲಿ ಸುಟ್ಟಿರುವ ವಸ್ತುಗಳೆಲ್ಲವನ್ನು ಅಥವಾ ಪದಾರ್ಥಗಳೆಲ್ಲವನ್ನು ಸ್ವೀಕರಿಸುವುದಕ್ಕೆ ಅಲ್ಲಿ ವರುಣ ದೇವರು ಇರುವುದಿಲ್ಲ. ಆ ಯಜ್ಞಕ್ಕೆ ಅಧಿಪತಿಯಾಗಿರುವ ಗ್ರಹಶಕ್ತಿಯೇ, ಯಜ್ಞದಲ್ಲಿ ಸುಟ್ಟುಹೋಗಿ ಸೂಕ್ಷ್ಮರೂಪವಾದ

ಪದಾರ್ಥಗಳನ್ನು ತೆಗೆದುಕೊಳ್ಳುತ್ತದೆ. ಹಾಗೆ ತೆಗೆದುಕೊಂಡ ಗ್ರಹವೇ ಮೊದಲೇ ದೇವರು ಹೇಳಿದ ಆಜ್ಞೆ ಪ್ರಕಾರ ಯಜ್ಞ ಮಾಡಿದವರ ಕೋರಿಕೆಯನ್ನು ಅನುಸರಿಸಿ ಮಳೆಯನ್ನು ಸುರಿಸಬಹುದು, ಅಥವಾ ಸುರಿಸದೇ ಇರಬಹುದು. ಇದೇ ವಿಧವಾಗಿ ಎಲ್ಲಾ ವಿಧಗಳ ಯಜ್ಞಗಳಲ್ಲಿ ನಡೆಯುತ್ತಿದೆ.

ಮನುಷ್ಯರು ಕೋರುವ ಪ್ರತಿಯೊಂದು ಕೋರಿಕೆ ದೇವರಿಗೆ ಆಮೋದ ಯೋಗ್ಯವಲ್ಲ. ಮನುಷ್ಯರು ಸಹ ಒಪ್ಪಿಕೊಳ್ಳದಂತಹ ಕೋರಿಕೆಯನ್ನು ಕೆಲವರು ಕೋರುತ್ತಿರುತ್ತಾರೆ. ಇತರರ ಆಸ್ತಿಯನ್ನು ಅಕ್ರಮವಾಗಿ ತೆಗೆದುಕೊಳ್ಳಬೇ ಕೆನ್ನುವ ಕೋರಿಕೆ, ದೇವರಿಗೆ ಆಮೋದ ಯೋಗ್ಯವಲ್ಲ. ಹಾಗೇ ಇತರರ ಹೆಂಡತಿ ಅವನನ್ನು ಬಿಟ್ಟು ತನ್ನ ಹತ್ತಿರಕ್ಕೆ ಬರಬೇಕೆನ್ನುವ ಕೋರಿಕೆ, ಮನುಷ್ಯರಿಗೂ ಸಹಾ ಆಮೋದವಾದದ್ದು ಅಲ್ಲ. ಇಂತಹ ಕೋರಿಕೆಗಳನ್ನು ಗ್ರಹಶಕ್ತಿಗಳು ಈಡೇರಿಸುವುದಿಲ್ಲ. ಇವೇ ಅಲ್ಲದೇ ಗ್ರಹಶಕ್ತಿಗೆ ಆಮೋದ ಯೋಗ್ಯವಾಗದ ಕೋರಿಕೆಗಳಿಂದ ಯಜ್ಞವನ್ನು ಮಾಡಿದರೆ ಅವು ಈಡೇರಿಸುವುದಿಲ್ಲ. ಅಷ್ಟೇ ಅಲ್ಲದೇ ಇನ್ನೂ ಕೆಲವು ಮನುಷ್ಯರ ಕೋರಿಕೆಗಳು ಗ್ರಹಶಕ್ತಿಗಳಿಗೂ ಸಹ ಕೋಪವನ್ನು ಉಂಟುಮಾಡುತ್ತವೆ. ಅಂತಹದರಲ್ಲಿ ಯಜ್ಞಗಳು ನೆರವೇರದೆ ಹೋಗುವುದಲ್ಲದೇ, ಅಂತಹ ಯಜ್ಞಗಳಿಂದ ಮಾಡಿಸುವವರಿಗೇ ಮುಪ್ಪು ಬರುತ್ತದೆ. ಮಾಡಿದವರಿಗೂ ಸಹ ತೊಂದರೆ ತಪ್ಪುವುದಿಲ್ಲ. ಋತ್ವಿಕರಾದ ಬ್ರಾಹ್ಮಣರು ಅಂದುಕೊಂಡಹಾಗೆ ಯಜ್ಞಗಳಿಗೆ ಅಧಿಪತಿ ದೇವತೆಗಳು ಯಾರೂ ಇಲ್ಲ. ಆದ್ದರಿಂದ ಯಜ್ಞಗಳಿಗೆ, ದೇವತೆಗಳಿಗೆ ಯಾವ ಮಾತ್ರವೂ ಸಂಬಂಧವಿಲ್ಲ. ಬಾಹ್ಯಯಜ್ಞಗಳನ್ನು ಅನೇಕ ಹೆಸರುಗಳಿಂದ, ಅನೇಕ ಆಸೆಗಳಿಂದ ಮಾಡುವು ದರಿಂದ ಅವುಗಳಿಗೆ ಅಧಿಪತಿಗಳಾದ ಸೂಕ್ಷ್ಮಶಕ್ತಿಗಳು ಒಳ್ಳೆಯ ಉದ್ದೇಶದಿಂದ ಮಾಡುವವರಿಗೆ ಒಳ್ಳೆಯದನ್ನು, ಕೆಟ್ಟ ಉದ್ದೇಶ್ಯದಿಂದ ಮಾಡುವವರಿಗೆ ಕೆಟ್ಟ ಫಲವನ್ನೂ ಉಂಟುಮಾಡುತ್ತವೆ.

ದೇವತೆಗಳ ಆರಾಧನೆ ನಿಮಿತ್ತ ಮಾಡುವ ಯಾವ ಕಾರ್ಯವನ್ನಾದರೂ ಗ್ರಹಶಕ್ತಿಗಳು ಸಮರ್ಥಿಸುವುದಿಲ್ಲ. ದೇವರನ್ನು ಬಿಟ್ಟು ದೇವತೆಗಳನ್ನು ಆರಾಧಿಸು ವುದು ಆ ಶಕ್ತಿಗಳಿಗೆ ಸರಿಹೋಗುವುದಿಲ್ಲ. ದೇವರ ಜ್ಞಾನವನ್ನು ಪೂರ್ತಿಯಾಗಿ ತಿಳಿದಿರುವವು ಗ್ರಹಶಕ್ತಿಗಳು, ಭೂತ ಶಕ್ತಿಗಳು. ಗ್ರಹಗಳು, ಭೂತಗಳು ದೇವರ ಪಾಲನೆಯಲ್ಲಿ ಇರುವವರಾಗಿರುತ್ತಾರೆ. ಆದ್ದರಿಂದ ಗ್ರಹಗಳು, ಭೂತಗಳು ಮನುಷ್ಯರು ಪೂಜಿಸುವ ದೇವತೆಗಳಿಗಿಂತ ದೊಡ್ಡವರಾಗಿ ಇದ್ದಾರೆ. ಕೆಲವು ಆರಾಧನೆಗಳು ದೇವತೆಗಳಿಗೆ ಸಂಬಂಧಿಸಿರುವವಾದರೂ, ಹಾಗೇ ಕೆಲವು ಯಜ್ಞಗಳು ದೇವತೆಗಳಿಗೆ ಸಂಬಂಧಿಸಿರುವವಾದರೂ, ಅವುಗಳನ್ನು ಆರಾಧಿಸಿದ ವರಿಗೆ ಕೆಲವು ಕಡೆ ತಾವೇ ಫಲವನ್ನು ಕೊಟ್ಟರೂ, ಕೆಲವು ಆರಾಧನೆಗಳನ್ನೂ, ಮತ್ತೂ ಕೆಲವು ಯಜ್ಞಗಳನ್ನು ಪೂರ್ತಿ ವಿರೋಧಿಸಿದವರಾಗಿ ಅವುಗಳನ್ನು ಮಾಡಿದವರ ಮೇಲೆ ಕೋಪ ಇರುವವರಾಗಿ ತೀವ್ರವಾದ ನಷ್ಟವನ್ನು, ಕಷ್ಟ ವನ್ನುಂಟು ಮಾಡುವರು. ಇದನ್ನನುಸರಿಸಿ ಯಜ್ಞಗಳಿಂದ, ಆರಾಧನೆಗಳಿಂದ ಲಾಭವೇ ಅಲ್ಲ, ನಷ್ಟವೂ ಸಹ ಇದೆಯೆಂದು ತಿಳಿಯುತ್ತದೆ. ತ್ರೇತಾಯುಗದಲ್ಲಿ ರಾವಣಬ್ರಹ್ಮ ಕಾಲದಲ್ಲಿ ಎಷ್ಟೋ ಭಕ್ತರು ಎಂದುಕೊಳ್ಳುವವರು, ಜ್ಞಾನಿಗಳೆಂದು ಕೊಳ್ಳುವವರು ಕೆಲವು ಕೋರಿಕೆಗಳ ನಿಮಿತ್ತ ಯಜ್ಞಗಳು ಮಾಡಿದಾಗ, ಅವುಗಳನ್ನು ರಾವಣಬ್ರಹ್ಮ ಅನುಚರರು ಬಂದು ಭಂಗ ಮಾಡಿದಾಗ, ಆ ಯಜ್ಞಗಳಿಗೆ ಅಧಿಪತಿಗಳಾಗಿರುವ ಗ್ರಹಶಕ್ತಿಗಳು ರಾವಣಬ್ರಹ್ಮ ಅನುಚರರನ್ನು ಯಾವ ಮಾತ್ರವೂ ತಡೆಯದೆ, ಅವರನ್ನೇ ಸಮ್ಮತಿಸಿದ್ದಾರೆ. ಆ ಕಾಲದಲ್ಲೇ ರಾವಣಬ್ರಹ್ಮ ಯಜ್ಞಗಳನ್ನು ಮಾಡುವುದು ಅಧರ್ಮವೆಂದು, ತಮ್ಮ ದೇಶದಲ್ಲೇ ಅಲ್ಲದೇ ಪಕ್ಕದ ದೇಶವಾದ ಭಾರತದೇಶದಲ್ಲಿಯೂ ಸಹ ಪ್ರಚಾರ ಮಾಡಿದ್ದಾನೆ. ಅವರ ಪ್ರಚಾರಕ್ಕೆ ಅಡ್ಡ ಬಂದಿರುವವರನ್ನು ಶಿಕ್ಷಿಸುವುದು ಸಹ ನಡೆದಿದೆ. ಆ ದಿನ ಖಗೋಳಶಕ್ತಿಗಳೆಲ್ಲವೂ ರಾವಣನಿಗೆ ತಮ್ಮ ಸಮ್ಮತ ತಿಳಿಸುತ್ತಿದ್ದವು. ಅಂದಿನ ಕಾಲದಲ್ಲಿ ಭಾರತ ದೇಶದಲ್ಲಿ ದಕ್ಷಿಣ ಭಾಗದಲ್ಲಿ ರಾವಣಬ್ರಹ್ಮನ ಪ್ರಭಾವ ಹೆಚ್ಚಾಗಿ ಇರುವುದು, ಯಜ್ಞಗಳು

ಮಾಡುವವರನ್ನು ತಡೆಗಟ್ಟುವುದು, ಯಜ್ಞಗಳು ಅಧರ್ಮಗಳೆಂದು ಹೇಳುವುದು ಉತ್ತರ ಭಾರತದೇಶದಲ್ಲಿರುವವರಿಗೆ ಇಷ್ಟವಾಗಲಿಲ್ಲ.

ಉತ್ತರ ಭಾರತದೇಶದಲ್ಲಿ ಆರ್ಯರದೇ ಹೆಚ್ಚಿನ ಅಧಿಕಾರ ಇರುತ್ತಿತ್ತು. ಆರ್ಯರು ರಾಜರನ್ನು ಸಹಿತ ಅವರ ಅಧೀನದಲ್ಲಿ ಇಟ್ಟುಕೊಂಡು ಅವರು ಆಡಿದ್ದೇ ಆಟ, ಹೇಳಿದ್ದೇ ಹಾಡು ಎನ್ನುವಂತೆ ಅವರು ಮಾಡಿದ್ದೇ ಪೂಜೆ, ಮಾಡಿಸಿರುವುದೇ ಯಜ್ಞ ಅನ್ನುತ್ತಿದ್ದರು. ಅಧರ್ಮಕಾರ್ಯವೆಂದು ಯಜ್ಞಗಳನ್ನು ರಾವಣಬ್ರಹ್ಮ ವಿರೋಧಿಸಿದರಿಂದ, ರಾವಣನು ಆರ್ಯರಿಗೆ ಗರ್ಭಶತ್ರುವಿನಂತೆ ಕಾಣಿಸಿದ್ದಾನೆ. ಆ ದಿನ ಶ್ರೀಲಂಕ ಸಹ ಭಾರತದೇಶದಲ್ಲಿನ ಭೂಭಾಗವೇ ಆಗಿರುವುದರಿಂದ, ಲಂಕಾ ರಾಜ್ಯ ದಕ್ಷಿಣ ಭಾರತದೇಶದಲ್ಲಿ ಸ್ವಲ್ಪದವರೆಗು ವಿಸ್ತರಿಸಿ ಇತ್ತು. ಆದ್ದರಿಂದ ಉತ್ತರ ಭಾರತದೇಶದಲ್ಲಿನ ಆರ್ಯರು ದಕ್ಷಿಣ ಭಾರತದೇಶವನ್ನು ದ್ರಾವಿಡ ದೇಶವೆಂದು ಅನ್ನುತ್ತಿದ್ದರು. ದ್ರಾವಿಡದೇಶ ಅಜ್ಞಾನ ದೇಶವೆಂದು ಆರ್ಯರು ಅಂದಾಗ, ಉತ್ತರ ದೇಶದಲ್ಲಿನ ಆರ್ಯರು ಅಜ್ಞಾನಿಗಳೆಂದು ದ್ರಾವಿಡರು ಅನ್ನುತ್ತಿದ್ದರು. ರಾವಣಬ್ರಹ್ಮ ಕಾಲ ಮುಗಿದ ನಂತರ ಶ್ರೀಲಂಕ ಭೂಭಾಗ ತುಫಾನುಗಳಿಂದ ನೀರು ಸೇರಿ, ಭಾರತದೇಶದಿಂದ ಬೇರೆಯಾದ ನಂತರ, ದಕ್ಷಿಣ ದೇಶವಾದ ದ್ರಾವಿಡ ದೇಶದೊಳಗೆ ಆರ್ಯರು ಬಂದು ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳಬೇಕೆಂದುಕೊಂಡಿದ್ದಾರೆ. ಆಗಾಗಲೇ ದಕ್ಷಿಣ ಭಾರತದೇಶದಲ್ಲಿನ ಬ್ರಾಹ್ಮಣರೆಲ್ಲರೂ ಬ್ರಹ್ಮಜ್ಞಾನದಲ್ಲಿ ಒಳ್ಳೆಯ ಪ್ರಾವೀಣ್ಯತೆಯನ್ನು ಸಂಪಾಧಿಸಿದವರಾಗಿ ಇದ್ದರು. ದಕ್ಷಿಣ ದೇಶದಲ್ಲಿನ ಬ್ರಾಹ್ಮಣರು ಹೇಳಿರುವುದು ಹೇಳಿದಹಾಗೆ ನಡೆಯುವ ವಾಕ್ ಶುದ್ಧಿ ಇರುವವರಾಗಿ, ಜ್ಞಾನಶಕ್ತಿ ಇರುವವರಾಗಿ ಇರುತ್ತಿದ್ದರು. ಲಂಕಾರಾಜ್ಯಕ್ಕೆ ರಾಜನಾದ ರಾವಣಬ್ರಹ್ಮ ಬ್ರಾಹ್ಮಣನಾದ್ದರಿಂದ ಆತನ ವಂಶದವರು, ಅವರ ಬಂಧುಗಳು ಮೊದಲಾದ ಬ್ರಾಹ್ಮಣರೆಲ್ಲರೂ ದೊಡ್ಡ ಶಕ್ತಿ ಇರುವವರಾಗಿ ಇರುವಾಗ, ಉತ್ತರದೇಶದಲ್ಲಿನ ಬ್ರಾಹ್ಮಣರು ಬ್ರಹ್ಮಜ್ಞಾನ ಇಲ್ಲದವರಾಗಿ ಹೆಸರಿಗೆ ಬ್ರಾಹ್ಮಣರಾಗಿ ಇದ್ದರು. ಆಗಿನ ಕಾಲದಲ್ಲಿ ಅವರಿಗೆ ಬ್ರಾಹ್ಮಣರು ಅನ್ನುವ ಹೆಸರು ಇಲ್ಲ. ಆರ್ಯರು ಎಂದು

ಮಾತ್ರವೇ ಕರೆಯಲ್ಪಡುತ್ತಿದ್ದರು. ದಕ್ಷಿಣ ದೇಶದಲ್ಲಿನವರೇ ಬ್ರಾಹ್ಮಣ ಎಂದು ಹೆಸರು ಹೊಂದಿದ್ದರು. ತ್ರೇತಾಯುಗದ ನಂತರ ದ್ವಾಪರಯುಗ ಮೊದಲಿನಲ್ಲೇ ದಕ್ಷಿಣ ದೇಶದೊಳಗೆ ಬರಬೇಕೆಂದುಕೊಂಡ ಆರ್ಯರು ಒಬ್ಬೊಬ್ಬರಾಗಿ ಬಂದಿದ್ದಾರೆ. ಹಾಗೆ ಬಂದ ಆರ್ಯರು ಇಲ್ಲಿರುವ ಬ್ರಹ್ಮಣರೊಂದಿಗೆ ಸಂಬಂಧ ಬಾಂಧವ್ಯಗಳನ್ನು ಇಟ್ಟುಕೊಂಡಿದ್ದಾರೆ. ದ್ವಾಪರಯುಗದ ಆದಿಯಲ್ಲಿ ಆರ್ಯರು ದಕ್ಷಿಣ ದೇಶದೊಳಗೆ ಬಂದ ನಂತರ ಸುಮಾರು ಎಂಟು ಲಕ್ಷ ವರ್ಷಗಳಿಗೆ, ಮಾಯಾ ಪ್ರಭಾವದಿಂದ ದಕ್ಷಿಣ ದೇಶದಲ್ಲಿಯೂ ಸಹ ಆರ್ಯರ ಪ್ರಭಾವ ಹರಡಿಕೊಂಡು, ದ್ರಾವಿಡ ಬ್ರಾಹ್ಮಣರೂ ಸಹ ಅಧರ್ಮ ಆಚರಣೆಯಲ್ಲಿ ಮುಳುಗಿಹೋಗಿ, ಯಜ್ಞಗಳನ್ನು ಮಾಡುವುದಕ್ಕೆ ಅಭ್ಯಾಸವಾಗಿದ್ದಾರೆ. ದಕ್ಷಿಣದೇಶದಲ್ಲಿನ ಬ್ರಾಹ್ಮಣರು ಆರ್ಯ ಬ್ರಾಹ್ಮಣರ ಮಾತುಗಳನ್ನು ಕೇಳಿ, ತಮ್ಮ ವಂಶದವನಾದ ರಾವಣನನ್ನು ರಾಕ್ಷಸನೆಂದು ಅಂದಿದ್ದಾರೆ. ದ್ವಾಪರ ಯುಗ ಇನ್ನೂ ಸುಮಾರು ಎಪ್ಪತ್ತು ಸಾವಿರ ವರ್ಷಗಳು ಇರುವಂತೇ, ಆರ್ಯರು ತಮ್ಮ ಬಲವನ್ನು ದಕ್ಷಿಣ ದೇಶದಲ್ಲಿ ಬೆಳಸಿಕೊಳ್ಳುವುದಕ್ಕೆ ರಾವಣಬ್ರಹ್ಮನಿಗೆ ಶತ್ರುವಾದ ರಾಮನ ಗುಡಿ ಕಟ್ಟಿದ್ದಾರೆ. ಕೇವಲ ಪ್ರಾಂತೀಯ ದ್ವೇಷದಿಂದ ರಾವಣಬ್ರಹ್ಮ ಬ್ರಾಹ್ಮಣನಾದರೂ, ಕ್ಷತ್ರಿಯನಾದ ರಾಮನನ್ನು ದೊಡ್ಡದಾಗಿ ಮಾಡಿ ರಾವಣಬ್ರಹ್ಮನನ್ನು ಕಡಿಮೆ ಮಾಡಿದ್ದಾರೆ. ಪ್ರತಿಯೊಂದು ಊರಿನಲ್ಲೂ ರಾಮನ ಗುಡಿ ಇರುವಹಾಗೆ ಪ್ರಜೆಗಳಿಗೆ ಬೋಧಿಸಿದ್ದಾರೆ. ಆ ವಿಧವಾಗಿ ದ್ವಾಪರಯುಗದಲ್ಲಿ ಪ್ರತಿ ಊರಿನಲ್ಲೂ ರಾಮನ ಗುಡಿ ತಯಾರಾಗಿದೆ. ರಾಮನ ಗುಡಿ ಕಟ್ಟಿದ ಕಡೆ ಎಲ್ಲಾ ರಾಮನ ಪ್ರತಿಮೆಯನ್ನು ಪ್ರತಿಷ್ಠಿಸುವ ಸಮಯದಲ್ಲಿ ಯಜ್ಞವನ್ನು ಮಾಡುವುದು ವಿಧಿಯಾಗಿ ಇಟ್ಟಿದ್ದಾರೆ. ಶ್ರೀರಾಮನು ಯಜ್ಞ ರಕ್ಷಕ ನಾಗಿರುವುದರಿಂದ ಶ್ರೀರಾಮ ದೇವಾಲಯಗಳ ಹತ್ತಿರ ತಪ್ಪದೆ ಯಜ್ಞ ಮಾಡಬೇಕೆಂದು ನಿರ್ಣಯಿಸಿದ್ದಾರೆ.

ಆರ್ಯ ಬ್ರಾಹ್ಮಣರು ದ್ರಾವಿಡ ಬ್ರಾಹ್ಮಣರನ್ನು ಪೂರ್ತಿಯಾಗಿ ಬದಲಾಯಿಸುವುದರಿಂದ, ದ್ವಾಪರಯುಗ ಕೊನೆಗೆ ಅಧರ್ಮಗಳಾದ ಯಜ್ಞಗಳಿಗೆ

ಹೆಚ್ಚಿನ ಪಟ್ಟು ಬಂದಿದೆ. ಬ್ರಹ್ಮಜ್ಞಾನ ತಿಳಿಯದಂತೆ ಹೋಗಿ, ಧರ್ಮಗಳು ನಶಿಸಿ ಕೊನೆಯ ದಶೆಗೆ ಬಂದಿವೆ. ಧರ್ಮಗಳಿಗೆ ಮುಪ್ಪು (ಹಾನಿ) ಏರ್ಪಟ್ಟು ಅಧರ್ಮಗಳು ಹೆಚ್ಚಾಗಿ ಹೋಗಿವೆಯೆಂದು ಗ್ರಹಿಸಿದ ದೇವರು ಪುನಃ ಧರ್ಮಗಳನ್ನು ನೆಲೆಗೊಳಿಸಬೇಕಾದ ಅವಶ್ಯ ಬಂದಿದೆ. ಆಗ ಶ್ರೀಕೃಷ್ಣನ ಅವತಾರವಾಗಿ ಭಗವಂತನು ಭೂಮಿಮೇಲೆ ಬಂದಿದ್ದಾನೆ. ಅಧರ್ಮಗಳಿಗೆ ತವರು ಮನೆಯಾದ ಉತ್ತರ ಭಾರತ ದೇಶದಲ್ಲೇ ಭಗವಂತನು ಹುಟ್ಟಿದ್ದಾನೆ. ಅಧರ್ಮಗಳಿಗೆ ಬಂಧುಗಳಾದ ಆರ್ಯರಿಗೆ ತಿಳಿಯುವಹಾಗೆ ಅಲ್ಲೇ ಸಮಯವನ್ನು ನೋಡಿ ಭಗವದ್ಗೀತೆ ರೂಪದಲ್ಲಿ ಧರ್ಮಗಳನ್ನು ಬೋಧಿಸಿದ್ದಾನೆ. ನಂತರ ವೇದವ್ಯಾಸರಿಂದ ಭಗವದ್ಗೀತೆ, ಶ್ಲೋಕಗಳ ರೂಪದಲ್ಲಿ ಸಂಸ್ಕೃತ ಭಾಷೆಯಲ್ಲಿ ಹೊರ ಬಂದಿದೆ. ಅಂದಿನ ಆರ್ಯರ ಭಾಷೆ ಸಂಸ್ಕೃತ ಭಾಷೆ. ಸಂಸ್ಕೃತ ಭಾಷೆ ಲಿಪಿ ಇಲ್ಲದ ಭಾಷೆ. ಆರ್ಯರು ಮಾತ್ರ ಸಂಸ್ಕೃತವನ್ನು ಯಾರಿಗೂ ಅರ್ಥವಾಗದ ಹಾಗೆ ಮಾತನಾಡುತ್ತಿದ್ದರು. ಈ ಪ್ರಾಂತದಲ್ಲಿ ಎರಿಕಲ ಭಾಷಯಂತದ್ದು ಸಂಸ್ಕೃತ ಭಾಷೆ. ಎರಿಕಲ ವರ್ಗದವರಿಗೆ ಮಾತ್ರ ಅವರ ಭಾಷೆ ತಿಳಿದಿರುತ್ತದೆ. ಆದ್ದರಿಂದ ಅವರ ಮಾತುಗಳು ಯಾರಿಗೂ ಅರ್ಥವಾಗದೇ ಇರುವುದಕ್ಕೆ, ಅವರ ಭಾಷೆಯನ್ನು ಅವರೇ ಮಾತನಾಡಿಕೊಳ್ಳುತ್ತಿದ್ದರು. ಹಾಗೇ ಆರ್ಯ ವರ್ಗದವರಿಗೆ ಮಾತ್ರ ಸಂಸ್ಕೃತ ಭಾಷೆ ತಿಳಿದಿದೆ. ಆದ್ದರಿಂದ ಅವರದೇನೋ ದೊಡ್ಡ ಭಾಷೆ ಅನ್ನುವ ಹಾಗೆ, ಅದನ್ನು ದೇವ ಭಾಷೆಯೆಂದು ಪ್ರಚಾರ ಮಾಡಿದ್ದಾರೆ. ಇದೆಲ್ಲವೂ ಅಂದಿನ ಆರ್ಯರ ಬುದ್ಧಿ. ವೇದವ್ಯಾಸನು ಸಹ ಆರ್ಯನೇ ಆಗಿರುವುದರಿಂದ ಹಿಂದಿ ಲಿಪಿಯನ್ನು ಉಪಯೋಗಿಸಿ ಸಂಸ್ಕೃತ ಭಾಷೆಯಲ್ಲಿ ಭಗವದ್ಗೀತೆಯನ್ನು ಬರೆದಿದ್ದಾನೆ. ಸಂಸ್ಕೃತ ಆರ್ಯರಿಗೆ ಹೊರತುಪಡಿಸಿ ಯಾರಿಗೂ ತಿಳಿಯದು, ಆದ್ದರಿಂದ ಗೀತೆ ವಿವರಕ್ಕೋಸ್ಕರ ಆ ಭಾಷೆ ತಿಳಿದವರ ಮೇಲೇ ಆಧಾರವಾಗಿರಬೇಕೆಂದು ಅಂದಿನವರ ಉದ್ದೇಶ. ಯಾರಿಗೂ ಅರ್ಥವಾಗದೇ ಇರುವುದಕ್ಕೆ ಆರ್ಯರು ಯಾವುದು ಬರೆದರೂ ತಮ್ಮ ಭಾಷೆಯಲ್ಲೇ ಬರೆಯುತ್ತಿದ್ದರು. ಹಾಗೆ ಅವರು ಬರೆದಿರುವುದನ್ನು

ತಿಳಿಯಬೇಕೆಂದರೆ ಯಾರಾದರೂ ಅವರ ಹತ್ತಿರಕ್ಕೇ ಹೋಗಬೇಕು. ಅಂದಿನ ಕಾಲದಲ್ಲಿ ಆರ್ಯರು ಹಿಂದೀ ಭಾಷೆಯಲ್ಲಿ ಪಂಡಿತರಾಗಿದ್ದು, ಹಿಂದೀ ಭಾಷೆಯನ್ನು ಬರೆಯದೆ ಸಂಸ್ಕೃತ ಭಾಷೆಯನ್ನು ಬರೆಯುವುದು, ಅದನ್ನೇ ದೇವಭಾಷೆ ಎಂದು ಹೇಳುವುದು ನೋಡಿದರೆ, ಆರ್ಯರು ಬಹಳ ಬುದ್ಧಿವಂತರೆಂದು ಅರ್ಥವಾಗುತ್ತದಲ್ಲವೆ!

ಆರ್ಯರು ಬುದ್ಧಿವಂತರಾದ್ದರಿಂದಲೇ ದ್ರಾವಿಡ ದೇಶದೊಳಗೆ ಬಂದು ದ್ರಾವಿಡ ಬ್ರಾಹ್ಮಣರನ್ನು ಬದಲಾಯಿಸಿದ್ದಾರೆ. ತಾವು ದ್ರಾವಿಡರೆನ್ನುವ ಧ್ಯಾಸ ಸಹ ಇಲ್ಲದಂತೆ ಮಾಡಿ, ತಮ್ಮ ವಂಶದವನಾದ ರಾವಣನನ್ನು ತಾವೇ ದೂಷಿಸುವಹಾಗೆ ಮಾಡಿದ್ದಾರೆ. ರಾವಣನು ಬೇರೆ, ತಾವು ಬೇರೆ ಅನ್ನುವಂತೆ ಮಾಡಿದ್ದಾರೆ. ರಾವಣನು ವಿರೋಧಿಸಿದ ಯಜ್ಞಗಳನ್ನು ದ್ರಾವಿಡ ಬ್ರಾಹ್ಮಣರಿಂದಲೇ ಮಾಡಿಸಿದ್ದಾರೆ, ಮಾಡಿಸುತ್ತಿದ್ದಾರೆ. ಆರ್ಯ ಸಮಾಜವೆನ್ನುವ ಹೆಸರಿಂದ ಯಜ್ಞಗಳು ಮಾಡುವುದೇ ವಿಧಿಯಾಗಿ ಇಟ್ಟಿದ್ದಾರೆ. ಇಂದಿನ ದಕ್ಷಿಣ ಭಾರತ ಬ್ರಾಹ್ಮಣರೇ ಅಲ್ಲದೇ, ಇತರೆ ಕುಲದವರೂ ಸಹ ನಮ್ಮದು ಆರ್ಯ ಸಮಾಜವೆಂದು ಹೇಳಿಕೊಳ್ಳುವುದು ವಿಚಿತ್ರವಾಗಿ ಕಾಣಿಸುತ್ತಿದೆ. ಭಾರತದೇಶ ವೊಂದರ ಸಂಸ್ಕೃತಿ ಎಲ್ಲವೂ ಆರ್ಯರ ಕೈಬರಹವಾದ ಸಂಸ್ಕೃತ ಭಾಷೆಯಲ್ಲಿ ಸಿಲುಕಿಕೊಂಡು ಹೋಗಿದೆ. ಕೊನೆಗೆ ಭಗವದ್ಗೀತೆಯೂ ಸಹ ಸಂಸ್ಕೃತ ಭಾಷೆಯಲ್ಲೇ ಸಿಲುಕಿಕೊಂಡು ಹೋಗುವುದಲ್ಲದೇ, ಈ ದಿನ ಸಂಸ್ಕೃತ ತಿಳಿದವನೇ ಸ್ವಾಮಿ, ಗುರುವು ಅನ್ನುವ ಭಾವ ಇದೆ. ಭಾವವನ್ನು ತಿಳಿಸುವುದೇ ಭಾಷೆ. ಇತ್ತ ದೇಶ ಭಾಷೆಗಳಲ್ಲಿ ದಕ್ಷಿಣ ದೇಶ ಭಾಷೆಯಾದ ತೆಲುಗು ದೊಡ್ಡದು ಆದಾಗ, ಮೇಲಾಗಿ ಲಿಪಿಯಿರುವ ದೊಡ್ಡ ಭಾಷೆ ತೆಲುಗು ಆದಾಗ, ಎರಿಕಲ ಭಾಷೆಯಂತಹ ಲಿಪಿ ಇಲ್ಲದ ಭಾಷೆ ಆದ ಸಂಸ್ಕೃತವನ್ನು ದೊಡ್ಡದಾಗಿ ಹೇಳಿಕೊಳ್ಳಬೇಕಾದ ಅವಶ್ಯವೇನು ಬಂದಿದೆಯೆಂದು ನಾನು ಪ್ರಶ್ನಿಸುತ್ತಿದ್ದೇನೆ. ನನ್ನ ಮಾತುಗಳು ಮುಳ್ಳಿನಂತೆ ಕೆಲವರಿಗೆ ಚುಚ್ಚಿಕೊಳ್ಳಬಹುದು. ಆದರೂ ನಿಮ್ಮ ಹೃದಯದ ಮೇಲೆ ಕೈಯನ್ನು ಇಟ್ಟು, ನಾನು ಸತ್ಯವನ್ನು ಹೇಳುತ್ತಿದ್ದೇನೋ

ಇಲ್ಲವೋ ನೀವೇ ಹೇಳಿ. ಅಸೂಯೆ ಬೇಡ, ಆಲೋಚನೆ ಬೇಕೆಂದು ಹೇಳುತ್ತಿದ್ದೇನೆ.

ದ್ರಾವಿಡ ದೇಶದಲ್ಲಿ ಹುಟ್ಟಿದ ನಮಗೆ ರಾವಣನು ಬ್ರಾಹ್ಮಣ ಎನ್ನುವ ವಿಷಯವೂ ಸಹ ತಿಳಿಯದೇ ಹೋಗಿದೆ. ಅಷ್ಟೇ ಅಲ್ಲದೇ ಆತನು ಬ್ರಹ್ಮಜ್ಞಾನಿ ಎಂದೂ, ತ್ರಿಕಾಲ ಜ್ಞಾನಿ ಎಂದೂ ಸಹ ಯಾರಿಗೂ ತಿಳಿಯದು. ಎಲ್ಲರಿಗೂ ತಿಳಿದಿರುವುದು ರಾವಣನು ರಾಕ್ಷಸನು. ಸೀತೆಯನ್ನು ಅಪಹರಿಸಿದ ಕಾಮಾಂಧನು. ಆದರೇ ಹತ್ತು ತಿಂಗಳ ಕಾಲ ರಾವಣಬ್ರಹ್ಮನ ಹತ್ತಿರ ಲಂಕೆಯಲ್ಲಿರುವ ಸೀತೆ, ರಾವಣನು ದುರ್ಮಾರ್ಗನೆಂದು ಒಂದು ಬಾರಿಯೂ ಸಹ ಅನ್ನಲಿಲ್ಲ. ಹತ್ತು ತಿಂಗಳ ಕಾಲ ಸೀತೆಯನ್ನು ಹೆತ್ತ ತಂದೆಯಂತೆ ನೋಡಿಕೊಂಡ ರಾವಣನು, ಆರ್ಯರ ಬರಹದಲ್ಲಿ ಕೆಟ್ಟವನಾಗಿ ಹೋಗಿದ್ದಾನೆ. ಯಜ್ಞಗಳನ್ನು ಅಧರ್ಮ ಗಳೆಂದು ವಿರೋಧಿಸಿದಕ್ಕೆ ಅದೇ ಕೆಲಸವಾಗಿ ರಾವಣನು ಕೆಟ್ಟವನೆಂದು ಆರ್ಯರು ಪ್ರಚಾರ ಮಾಡಿದ್ದಾರೆ. ದ್ವಾಪರ ಯುಗದ ಕೊನೆಯಲ್ಲಿ ಧರ್ಮಗಳಿಗೆ ಮುಪ್ಪು ಏರ್ಪಟ್ಟಿದೆಯೆಂದು ತಿಳಿದ ನಂತರ ಕೃಷ್ಣನು ಹುಟ್ಟಿ ಭಗವದ್ಗೀತೆಯನ್ನು ಹೇಳಿರುವಾಗ, ಅದು ಯಾರಿಗೂ ಅರ್ಥವಾಗದಂತೆ ಮಾಡಿದ್ದಾರೆ. ದೇವರು ಭಗವದ್ಗೀತೆಯಲ್ಲಿ ಧರ್ಮಗಳನ್ನು ತಿಳಿಸಿ ಹೋದಾಗ, ಕೊನೆಗೆ ಅದರಲ್ಲಿ ಧರ್ಮಗಳಿವೆಯೋ, ಅಧರ್ಮಗಳಿವೆಯೋ ಅರ್ಥವಾಗದೇ ಇರುವಹಾಗೆ ಮಾಡಿದ್ದಾರೆ. ದೇವರು ಹೇಳಿದ ಭಾವಗಳಿಗೆ ವಿರುದ್ಧವಾದ ಭಾವಗಳಿರುವ ಸಂಸ್ಕೃತ ಶ್ಲೋಕಗಳನ್ನು ಗೀತೆಯಲ್ಲಿ ಹೇಳಿಸಿದ್ದಾರೆ. ದೇವರ ಜ್ಞಾನವನ್ನೇ ಅರ್ಥವಾಗದ ಹಾಗೆ ಮಾಡಿ, ಮನುಷ್ಯರೆಲ್ಲರನ್ನೂ ಶೂದ್ರರೆಂದು, ತಾವು ಶುಭ್ರತೆ ಇರುವವರೆಂದು ಹೇಳುವುದರಿಂದ, ತೀರ್ಥ ಪ್ರಸಾದಗಳನ್ನೂ ಸಹ ದೂರದಿಂದ ಕೊಡುವುದರಿಂದ, ಇಷ್ಟು ಕಾಲ ಎಷ್ಟೋ ತಾಳ್ಮೆಯಿಂದ ಇರುವ ಶೂದ್ರರೆಲ್ಲರೂ ಬೇಧ ಭಾವವಿಲ್ಲದ, ಹಿಂದುಳಿದವರೆಂದು ಬೇಧವಿಲ್ಲದ ಕ್ರೈಸ್ತವದೊಳಗೆ ಹೋಗುತ್ತಿದ್ದಾರೆ. ಅದರಿಂದ ಹಿಂದೂ ಮತ ಈದಿನ ಪೂರ್ತಿಯಾಗಿ ಕ್ಷೀಣಿಸುವ ಅಪಾಯದೊಳಗೆ ಹೋಗಿದೆ. ಬುದ್ಧಿವಂತರಾದ ಆರ್ಯರು ಹಿಂದೂಮತ

ಕ್ಷೀಣಿಸುತ್ತಿದೆಯೆಂದು, ಮನುಷ್ಯರು ಇಲ್ಲದ ಮತದ ಮೇಲೆ ತಮ್ಮ ಬಲವಿರುವುದಿಲ್ಲವೆಂದು ಆಲೋಚಿಸಿ, ಬಹು ಬುದ್ಧಿವಂತರಾಗಿ ತಾವು ಹಿಂದೆ ಇದ್ದು, ಶೂದ್ರರಿಂದಲೇ ಹಿಂದೂಮತ ರಕ್ಷಣ ಸಂಘಗಳನ್ನು ಸ್ಥಾಪಿಸಿ, ತಮಗೆ ವಿರುದ್ಧ ಬೋಧನೆಗಳು ಮಾಡುವ ನಮ್ಮಂಥವರ ಮೇಲೆಯೂ ಸಹಾ ಇವರು ಪರಮತವನ್ನು ಬೋಧಿಸುತ್ತಿದ್ದಾರೆಂದು ಹಿಂದೂ ಶೂದ್ರರನ್ನೇ ರೊಚ್ಚಿಗೇಳಿಸಿ, ಹಿಂದೂ ಧರ್ಮಸಿದ್ಧಾಂತ ಕರ್ತರಾದ ನಮ್ಮ ಮೇಲೆಯೇ ಯುದ್ಧಕ್ಕೆ ಕಳುಹಿಸುತ್ತಿದ್ದಾರೆ. ಹಿಂದಿನ ಚರಿತ್ರೆ ತಿಳಿಯದ ಹಿಂದೂ ರಕ್ಷಕರೆಂಬ ಹಿಂದುಗಳು ನಾವು ಮತವನ್ನು ರಕ್ಷಿಸುತ್ತಿದ್ದೇವೆಂದುಕೊಳ್ಳುತ್ತಿದ್ದಾರೆ ಹೊರತು, ನಮ್ಮ ಹಿಂದೆ ದೊಡ್ಡ ಕುತಂತ್ರ ಅಡಗಿದೆಯೆಂದು, ಹಿಂದೂ ಮತ ಕ್ಷೀಣಿಸುವುದಕ್ಕೆ ಅಸಲು ಕಾರಕರು ಇಂಥವರೆಂದು ತಿಳಿಯದೇ ಹಿಂದೂಮತವನ್ನು ಕೈಯ್ಯಾರೆ ಕ್ಷೀಣಿಸುವಂತೆ ಮಾಡಿಕೊಳ್ಳುತ್ತಿದ್ದಾರೆ.

ಈಗಲಾದರೂ ಹಿಂದೂಮತ ಚೆನ್ನಾಗಾಗಬೇಕೆಂದರೇ ಹಿಂದೂ ಮತದಲ್ಲಿ ಸಮಾನತ್ವ ಬರಬೇಕು. ಸಮಾನತ್ವ ಬರಬೇಕೆಂದರೇ ದೇವರು ಹೇಳಿದ ಭಗವದ್ಗೀತೆಯನ್ನು ಓದಬೇಕು. ಭಗವದ್ಗೀತೆಯನ್ನು ಓದಬೇಕೆಂದರೇ ಮೊದಲು ಬ್ರಾಹ್ಮಣರು ಅದನ್ನು ಸಕ್ರಮವಾಗಿ ಬೋಧಿಸಬೇಕು. ಬ್ರಾಹ್ಮಣರು ಸಕ್ರಮವಾಗಿ ಬೋಧಿಸಬೇಕೆಂದರೆ ಮೊದಲು ತಾವು ದ್ರಾವಿಡ ಬ್ರಾಹ್ಮಣರೆಂದು ತಿಳಿದು ಕೊಳ್ಳಬೇಕು. ತಾವು ದ್ರಾವಿಡ ಬ್ರಾಹ್ಮಣರೆಂದು ತಿಳಿಯಬೇಕೆಂದರೆ ಮೊದಲು ಆರ್ಯರು ಯಾರೋ ತಿಳಿಯಬೇಕು. ಈ ವಿಧವಾಗಿ ಆರ್ಯರಿಂದ ಇಂದಿನ ಸಮಾಜದವರೆಗೂ ಹೇಗೆ ಬದಲಾಗಿದ್ದೇವೋ ತಿಳಿಯಬೇಕು. ಆರ್ಯರ ಅಧರ್ಮಗಳನ್ನು ಸ್ಥಗಿತ ಮಾಡುವುದಕ್ಕೆ, ಆರ್ಯರ ದೇಶದಲ್ಲೇ ಭಗವದ್ಗೀತೆ ಬೋಧಿಸಲಾಗಿದೆಯೆಂದು ತಿಳಿದು, ಧರ್ಮ ಪ್ರತಿಷ್ಠಾಪನೆ ನಡೆದ ಗೀತೆಯನ್ನು ಓದಬೇಕು. ಗೀತೆಯಲ್ಲಿ ದೇವರು ಹೇಳಿದ ಭಾವಗಳನ್ನು ತಿಳಿಯುವುದಾದರೇ, ಆಗ ನಾವು ಎಲ್ಲರೂ ಧರ್ಮಗಳನ್ನು ಗುರುತಿಸಬಹುದು. ಎಂದಿಗಾದರೂ ಧರ್ಮಗಳನ್ನು ಗುರುತಿಸಿ ಅವುಗಳನ್ನು ಅನುಸರಿಸುತ್ತೀವೋ, ಆಗ ಮನುಷ್ಯನಿಗೂ

ಶಾಂತಿ ಸಿಗುತ್ತದೆ. ಧರ್ಮಗಳು ತಿಳಿಯದವರೆಗು ಯಾವ ಮನುಷ್ಯನಿಗೂ ಶಾಂತಿ ಇರುವುದಿಲ್ಲ. ಧರ್ಮ ತಿಳಿಯದವರೆಗು ಮನುಷ್ಯ ಆಸೆಗಳ ಬಲೆಯಲ್ಲಿ ಸಿಲುಕಿಕೊಂಡು, ಯಾವ ಯಜ್ಞ ಮಾಡಿದರೆ ಯಾವ ಲಾಭ ಬರುತ್ತದೋ ಎಂದು ನೋಡುತ್ತಿರುತ್ತಾನೆ. ಅಷ್ಟೇ ಅಲ್ಲದೇ ಧರ್ಮಗಳಿಗೆ ನಿಲಯವಾದ ಹಿಂದೂಮತವನ್ನು ಬಿಟ್ಟು, ಇತರ ಮತದೊಳಗೆ ಹೋದರೆ ಒಳ್ಳೆಯದು ನಡೆಯುತ್ತದೇನೋ ಎಂದು, ನಾವು ಮಾಡಿಕೊಂಡ ಪಾಪ ಹೋಗುತ್ತದೇನೋ ಎಂದು ಅಂದುಕೊಂಡು, ಮತಗಳನ್ನು ಬದಲಾಯಿಸಿದರೆ ದೇವರಿಗೆ ದೂರವಾಗಿ ಹೋಗುವುದು ಹೊರತು ಏನೂ ನಡೆಯುವುದಿಲ್ಲ.

ಇಂದಿಗಾದರೂ ಇಂದೂ (ಹಿಂದೂ) ದೇಶವಾದ ಭಾರತದೇಶದಲ್ಲಿ ಹುಟ್ಟಿರುವುದಕ್ಕೆ ಹೆಮ್ಮೆಪಡೋಣ. ಭಾರತದೇಶ ಪ್ರಪಂಚ ದೇಶಗಳಲ್ಲಿಯೇ ಜ್ಞಾನವಿರುವ ದೇಶವೆಂದು, ದೈವಶಕ್ತಿ ಇರುವ ದೇಶವೆಂದು ಹೆಸರುವಾಸಿ ಆಗಿರುವ ದೇಶ. ಈ ದೇಶಕ್ಕೆ, ಯಾವ ದೇಶಕ್ಕೂ ಇಲ್ಲದ ಇಂದೂ ಅನ್ನುವ ಬಿರುದು ಇದೆ. ಈ ದೇಶದಲ್ಲೇ ಸೃಷ್ಠಿ ಆದಿಯಲ್ಲಿ ಸೂರ್ಯನಿಂದ ಧರ್ಮಗಳು ತಿಳಿಯಲ್ಪಟ್ಟಿವೆ. ನಂತರ ದ್ವಾಪರ ಯುಗದ ಕೊನೆಯಲ್ಲಿಯೂ ಸಹ ಧರ್ಮಗಳಿವು ಎಂದು, ಅಧರ್ಮಗಳಿವು ಎಂದು ಹೇಳಲಾಗಿವೆ. ಅಷ್ಟೇ ಅಲ್ಲದೇ ದೇವರು ಭಾರತದೇಶದಲ್ಲಿ ದ್ವಾಪರಯುಗದಲ್ಲಿ ಹುಟ್ಟಿ ನಂತರ ಕಲಿಯುಗದಲ್ಲಿ ಇತರ ದೇಶದಲ್ಲಿ ಹುಟ್ಟಿದ್ದಾನೆ. ಆತನ ಮೂರನೇ ಜನ್ಮ ಮುಕ್ಕೋನಾಕಾರವಾಗಿ ಏರ್ಪಡಬೇಕಾಗಿದೆ. ಆದ್ದರಿಂದ ದೇವರು ಹುಟ್ಟಿದರೇ ಮುಕ್ಕೋನ ಏರ್ಪಡುವುದಕ್ಕೆ ಭಾರತದೇಶದಲ್ಲೇ ಹುಟ್ಟಬೇಕು. ಎಷ್ಟೋ ದೊಡ್ಡ ಚರಿತ್ರೆ, ಎಷ್ಟೋ ದೊಡ್ಡ ಭವಿಷ್ಯತ್ತಿರುವ ಭಾರತದೇಶದಲ್ಲಿ ಹುಟ್ಟಿದ ಪ್ರತಿ ಮನುಷ್ಯ, ನಾನು ಇಂದೂ (ಜ್ಞಾನಿ) ಎಂದು ಹೆಮ್ಮೆ ಪಡಬೇಕು. ದೇವರು ಹುಟ್ಟುವುದಿಲ್ಲ ಅನ್ನುವ ಮತದೊಳಗೆ ಹೋಗಿ ಮನುಷ್ಯರು ಹೇಳುವುದು ಕೇಳಬೇಕೆ ಹೊರತು, ದೇವರು ಹೇಳುವುದು ಕೇಳುವುದಕ್ಕೆ ಅವಕಾಶವಿಲ್ಲ ತಾನೆ! ಅಂತಹದರಲ್ಲಿ ದೇವರು ಹುಟ್ಟಿ ತನ್ನ ಜ್ಞಾನವನ್ನು ತಾನೇ ಹೇಳುತ್ತೇನೆನ್ನುವ ಇಂದೂ (ಹಿಂದೂ) ಮತದಲ್ಲಿ ಇದ್ದರೇ,

ಎಂದಿಗಾದರೂ ದೇವರ ಮಾತುಗಳನ್ನು ಕೇಳಬಹುದಲ್ಲವೆ! ನಮ್ಮ ಮತದಲ್ಲಿ ದೇವರು ಹುಟ್ಟುವುದಿಲ್ಲ ಎಂದು ಹೇಳುವವರಿಗಿಂತ, ದೇವರು ಹುಟ್ಟುತ್ತಾನೆಂದು ಹೇಳುವ ಭಗವದ್ಗೀತೆಯನ್ನು ಓದಿ, ಧರ್ಮಗಳನ್ನು ಅಧರ್ಮಗಳನ್ನು ಬಿಡಿಸಿ ತಿಳಿದುಕೊಳ್ಳೋಣ. ಅದರಿಂದ ಎಂದಿಗಾದರೂ ದೇವರು ಹುಟ್ಟಿದರೇ ದೇವರನ್ನು, ಮನುಷ್ಯರನ್ನು ಬೇರೆ ಮಾಡಿಕೊಂಡು ದೇವರನ್ನೇ ನೋಡಬಹುದಲ್ಲ! ನಾಳೆ ದೇವರನ್ನು ನೋಡುವುದಕ್ಕೆ ಇಂದಿನ ಪ್ರಪಂಚದಲ್ಲಿ ಒಂದೇ ಒಂದು ಯಜ್ಞವಾದ ಜ್ಞಾನಯಜ್ಞವನ್ನು ತಿಳಿದುಕೊಳ್ಳೋಣ. ಜ್ಞಾನಯಜ್ಞವನ್ನು ತಿಳಿದರೇ, ಒಂದೇ ಜ್ಞಾನಾಗ್ನಿಯಿಂದ ಐದು ಪ್ರಪಂಚ ಜ್ಞಾನಗಳನ್ನು ಸುಟ್ಟುಹಾಕಿ, ಐದು ಭಾಗಗಳಾಗಿರುವ ಪ್ರಕೃತಿಯನ್ನು ಬಿಟ್ಟು, ಒಂದೇ ಒಂದು ಭಾಗವಾಗಿರುವ ದೇವರಂತೆ ಬದಲಾಗಿ ಹೋಗಬಹುದು, ಆಲೋಚಿಸಿರಿ.

ಸಮಾಪ್ತಿ

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ"

ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

––ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

Cell:09705864675, 09440556968, 9611133635

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ

KHUDA ISLAMIC SPIRITUAL SOCIETY

K.I.S.S

(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ

ಪ್ರಬೋಧ ಸೇವಾ ಸಮಿತಿ

ಬ್ರಹ್ಮ ಚಕ್ರ

ಕಾಲ ಚಕ್ರ

ಕರ್ಮ ಚಕ್ರ

ಗುಣ ಚಕ್ರ

ಬ್ರಹ್ಮ ನಾಡಿ

ತ್ರೈತ ಸಿದ್ಧಾಂತ

## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ

ದ್ರಾವಿಡ ಶ್ರೇಷ್ಠಿ ಸಂಘ

ಮಧ್ಯಾತ್ಮ ವಾರ್ತಕನು

ಜೀವಿಯು ಶ್ರೇಷ್ಠಿ

ದೇವರು ಗುಪ್ತ

## ದ್ರಾವಿಡ ಶ್ರೇಷ್ಠಿ ಸಂಘ (D.S.S)

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),
ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381
e-mail id : info@dravidashreshtisangham.org

***www.dravidashreshtisangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




**ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)**

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

***www.ravanabrahmadravidabrahmanasangham.org***

# ಯಜ್ಞಗಳು (ನಿಜವಾ–ಸುಳ್ಳಾ)

## ಇಂದೂ (ಹಿಂದೂ) ಮತದಲ್ಲಿ ಸಿದ್ಧಾಂತಕರ್ತರು



ಅದ್ವೈತ ಸಿದ್ಧಾಂತಕರ್ತ ಆದಿ ಶಂಕರಾಚಾರ್ಯರು
Birth:509 BC - Death:477 BC (32 Years) ಕೇರಳ



ವಿಶಿಷ್ಟಾದ್ವೈತ ಸಿದ್ಧಾಂತಕರ್ತ ರಾಮಾನುಜಾಚಾರ್ಯರು
Birth : 1017 – Death : 1137 (120 years) ತಮಿಳನಾಡು



ದ್ವೈತ ಸಿದ್ಧಾಂತಕರ್ತ ಮಧ್ವಾಚಾರ್ಯರು
Birth : 1238 – Death : 1317 (79 years) ಕರ್ನಾಟಕ



ತ್ರೈತ ಸಿದ್ಧಾಂತ ಆದಿಕರ್ತ ಪ್ರಬೋಧಾನಂದ ಯೋಗೀಶ್ವರರು
Birth : 1950 ಆಂಧ್ರಪ್ರದೇಶ್ (ರಾಯಲಸೀಮ)


Author :

The Only Guru of Three Religions
The Spiritual Emperor, Thraitha Theorem Originator

**Sri Acharya Prabodhananda Yogeeshwarulu**


www.thraithashakam.org